

# ಹಿಂಗಾರ



ಕರ್ನಾಟಕ ಸರ್ಕಾರ

ಅರೆಭಾಷೆ ತ್ರೈಮಾಸಿಕ

ಸಂಪುಟ-1 ಸಂಚಿಕೆ-2 ದಿನಾಂಕ : 10-11-2016 ಕೊಡಗು ರೂ.20/-

## ಆಟಿ-ಸೋಣ-ನಿರ್ನಾಲ್ ತಿಂಗ

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**




ಕೆಸರುಗದ್ದೆ ಕ್ರೀಡೋತ್ಸವ ಬೆಳ್ಳಾರೆ, ಸಮಾರೋಪ ಸಮಾರಂಭ–24.8.2016




ಕುಕ್ಕೆ ಸುಬ್ರಹ್ಮಣ್ಯ, ಯುವ ಅರೆಭಾಷೆ ಸಾಹಿತ್ಯ ಸಮಾವೇಶ ಉದ್ಘಾಟನೆ– 10.10.2016



ಮರಗೋಡು, ಸಾಂಪ್ರದಾಯಿಕ ಅಡುಗೆ ತರಬೇತಿ ಮತ್ತೆ ಪ್ರಾತ್ಯಕ್ಷಿಕೆ



# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್
ಕೊಲ್ಯದ ಗಿರೀಶ್

ಸಂಪಾದಕರ್
ಡಾ. ಪೂವಪ್ಪ ಕಣಿಯೂರು
ಮೋಹನ ಸೋನ

ವ್ಯವಸ್ಥಾಪಕ ಸಂಪಾದಕರ್
ಉಮರಬ್ಬ



**HINGARA**
A Quarterly Magazine

Vol -1, Issue - 2

Date : 10 November 2016

Page : 88

Copies : 500

RNI No. : KARARB00001

Price : Rs. 20/-

KODAGU

Cover Design : Vinay & Lohith, Bangalore



Printed by UMARABBA on behalf of Registrar, Karnataka Arebhase Samskruthi Mathu Sahithya Academy, and Published by UMARABBA on behalf of Registrar, Karnataka Arebhase Samskruthi Mathu Sahithya Academy on behalf of KARNATAKA AREBHASE SAMSKRUTHI MATHU SAHITHYA ACADEMY (Name of the Woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhase Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District.
Editor : UMARABBA

www.arebhasheacademy.com. Email : arebaseacademy@gmail.com.

# ಅಧ್ಯಕ್ಷರ ನುಡಿ

ಹಿಂಗಾರದ 5ನೇ ಆವೃತ್ತಿಗೆ ನೀವ್‌ಗಳಿಗೆಲ್ಲಾ ಸ್ವಾಗತ, 2ನೆ ವರ್ಷಕ್ಕೆ ಕಾಲಿಡುವ ಸಂದರ್ಭಲಿ ಓದ್‌ಗರಿಗೆ ಅಕಾಡೆಮಿ ವತಿಂದ ಶುಭಾಶಯ ಕೋರ್ತಾ ಒಳೆ.

ಕಾರ್ತಿಂಗ, ಆಟಿ, ಸೋಣ ತಿಂಗಲಿ ಕೊಡಗು, ದಕ್ಷಿಣ ಕನ್ನಡಲಿ ದೇವ್ರಿಗೆ, ದೈವಕ್ಕೆ ಕೊಡ್ದು, ಹಿರಿಯವ್ಕೆ ಕಾರಣಕ್ಕಿಡುವ ಪದ್ದತಿ ಹಂಗೆ ನಮ್ಮ ರೈತರಿಗೆ ಕೈ ತುಂಬಾ ಕೆಲ್ಸ. ಅರೆಬಾಸೆ ಸಂಸ್ಕೃತಿ ಕೃಷಿ ಪ್ರಧಾನ, ಈ ನಿಟ್ಟ್‌ಲಿ ನಾವು ನಮ್ಮ ಪದ್ದತಿ, ಪರಂಪರೆ, ಸಂಸ್ಕೃತಿ, ಗ್ರಾಮೀಣ ಕ್ರೀಡೆಗಳ ಪರಿಚಯ ಮಾಡಿಕೆ ಅವಂದೂರು ಕಾಳೇರಮ್ಮನ ಅಯ್ಯಣ್ಣ ನವರ ಗದ್ದೆಲಿ ನಡ್ಸಿದ ಕೆಸರ್ ಗದ್ದೆ ಕ್ರೀಡೋತ್ಸವ ಮತ್ತೆ ಸಾಂಪ್ರದಾಯಿಕ ನಾಟಿ ಓಟ ಕಾರ್ಯಕ್ರಮ ಬಾರಿ ಲಾಯ್ಕಾಗಿ ನಡ್ತ್. ದಕ್ಷಿಣ ಕನ್ನಡ ಜಿಲ್ಲೆ ಬೆಳ್ಳಾರೆ ಗ್ರಾಮದ ಕಾವಿನಮೂಲೆ ಐತಪ್ಪ ಗೌಡರ ಗದ್ದೆಲಿ ಕೂಡ ಈ ಕಾರ್ಯಕ್ರಮನ ನಡ್ಸಿದ್ದೊ, ಆಟಿ ತಿಂಗಲಿ ಸುಳ್ಯ ತಾಲೂಕ್‌ನ ಪೈಲೂರು ಗ್ರಾಮ ಮತ್ತೆ ಚೊಕ್ಕಡಿ ಗ್ರಾಮಲಿ "ಆಟಿ ಉತ್ಸವ" ಕಾರ್ಯಕ್ರಮಗಳ್ನ ಹಮ್ಮಿಕಂಡಿದ್ದೊ. ಯುವ ಪ್ರತಿಭೆಗಳ್ನ ಗುರ್ತ್‌ಸುವ ನಿಟ್ಟ್‌ಲಿ ಕುಕ್ಕೇಶ್ರೀ ಸುಬ್ರಹ್ಮಣ್ಯ ಇಲ್ಲಿ "ಯುವ ಅರೆಭಾಷೆ ಸಾಹಿತ್ಯ ಸಮಾವೇಶ" ಕಾರ್ಯಕ್ರಮನ ಏರ್ಪಡ್ಸಿ ಯುವ ಪ್ರತಿಭೆಗಳ ಸಾಹಿತ್ಯ ಗೋಷ್ಠಿ, ಕವಿಗೋಷ್ಠಿ, ವಿಚಾರಗೋಷ್ಠಿ ಕಥೆ, ಕವನ, ಚುಟುಕುಗಳ್ನ ಪ್ರಸ್ತುತ ಪಡ್ಸಿದ್ದೊ.

ಆಧುನಿಕ ಮತ್ತೆ ಯಾಂತ್ರಿಕ ಯುಗಲಿ ಬೇಕರಿ ಆಹಾರಕ್ಕೆ ಮಾರುಹೋದಂತ ಸಮಯಲಿ ಅಕಾಡೆಮಿ ವತಿಂದ ಅರೆಭಾಷಿಕರ ಸಾಂಪ್ರದಾಯಿಕ ಅಡಿಗೆ ತರಭೇತಿ ಕಾರ್ಯಕ್ರಮ ಆತ್. ಸುಮಾರ್ 2000 ಜನ ಕೂಡಿ ಆಡ್ದ ಕಾರ್ಯಕ್ರಮ 6 ದಿನ ನಡ್ತ್. ಈ ಎಲ್ಲಾ ಕಾರ್ಯಕ್ರಮಗಳಿಗೆ ಪ್ರತ್ಯಕ್ಷ ಹಂಗೆ ಪರೋಕ್ಷವಾಗಿ ಸಹಕರ್ಸಿದವ್ಕೆ ಧನ್ಯವಾದ ತಿಳ್ಸ್‌ತಾ ಅಕಾಡೆಮಿ ಮುಂದಕ್ಕೆ ನಡ್ಸುವ ಕಾರ್ಯಕ್ರಮಗಳಿಗೆ ಸಂಸ್ಕೃತಿ ಮತ್ತು ಸಾಹಿತ್ಯ ಬೆಳ್ಸಿಕೆ ನೀವ್ ಗಳ ಸಹಕಾರ ಕೋರ್ತಾವೊಳೊ.

ಅಕಾಡೆಮಿ ಶ್ರೇಯಸ್ಸಿಗೆ ದುಡಿತಾ ಇರ್ವ ಎಲ್ಲಾ ಅಕಾಡೆಮಿ ಸದಸ್ಯರಿಗೂ ಪುಸ್ತಕ ಸಮಿತಿ ಸದಸ್ಯರಿಗೂ ಹಿಂಗಾರ ಪ್ರಕಟಣಾ ಸಮಿತಿ ಸದಸ್ಯರಿಗೂ ಹಂಗೆ ಎಲ್ಲಾ ಓದುಗರಿಗೂ ನನ್ನ ಕೃತಜ್ಞತೆನ ತಿಳ್ಸ್‌ತಾ ಒಳೆ.

**10.11.2016** **– ಕೊಲ್ಯದ ಗಿರೀಶ್**

# ಸಂಪಾದಕೀಯ...

ಅರೆಬಾಸೆನ ಈ ಹಿಂಗಾರ ತ್ರೈಮಾಸಿಕನ ನಿರಂತರವಾಗಿಸುವಲ್ಲಿ ನೀವೆಲ್ಲಾ ಸಹಕರಿಸ್ತೊಳೊರಿ. ಇದ್ ನಾವ್ಗೆ ಕುಸಿ ಕೊಡುವ ಸಂಗತಿ ಆವುಟು. ನೀವು ಈ ತ್ರೈಮಾಸಿಕನ ಓದುದರೊಟ್ಟಿಗೆ ನಾವ್ಗೆ ಬರಹಗಳ ಕೊಟ್ಟ್ ಸಹರಿಸ್ತೊಳೊರಿ. ನಮ್ಮ ನಿರೀಕ್ಷೆನೂ ಅದೇ ಆಗುಟು. ಇನ್ನ್ ಮುಂದೆನೂ ನಾವು ಇದರ ಬಯಸ್ತೋಲೊ.

ಈ ಸಂಚಿಕೆಲಿ ನಾವು ಆಟಿ-ಸೋಣ-ನಿರ್ನಾಲ್ ಮುಟ್ಟ ಅಕಾಡೆಮಿ ನಡ್ಸಿದ ಜಂಬರನ ದಾಖಲೆ ಮಾಡ್ದರೊಟ್ಟಿಗೆ ಜಂಬರನ ಅವಲೋಕನ ಮಾಡ್ವ ಪ್ರಯತ್ನನೂ ಮಾಡ್ಯೊಳೊ. ಆಟಿ ತಿಂಗಳ್ಲಿ ನಾವು ಹಲವು ಆಟಿ ಉತ್ಸವ ಪೊರ್ಲುಲಿ ನಡ್ಸಿಯೊಳೊ. ಅರೆಭಾಷಿಕ ಸಮುದಾಯದ ಸಂಪ್ರದಾಯಿಕ ಅಡುಗೆ ತರಬೇತಿ ಹಾಂಗೆನೆ ಪ್ರಾತ್ಯಕ್ಷಿಕೆ ಕಾರ್ಯಕ್ರಮನ ಮರ್ಕ್ಲೋಡಲ್ಲಿ ನಡ್ಸ್ಯೊಳೊ. ಕುಕ್ಕೆ ಸುಬ್ರಹ್ಮಣ್ಯಲಿ ಅರೆಭಾಷಿಕ ಯುವ ಸಾಹಿತ್ಯ ಸಂಭ್ರಮಂತೇಳ್ವ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಮಾವೇಶನನೂ ನಡೆಸ್ಯೊಳೊ. ಸಂಘ ಸಂಸ್ಥೆಗ ನಡ್ಸಿದ ಸಾಂಸ್ಕೃತಿಕ ಅರೆಭಾಷಿಕ ಕಾರ್ಯಕ್ರಮಕ್ಕೆ ಧನ ಸಹಾಯ, ಸಾಂಸ್ಕೃತಿಕ ತಂಡಗಳ ಪ್ರಾಯೋಜಕತ್ವಗಳ ಕೊಟ್ಟೊಳೊ.

ಅರೆಭಾಷಿಕ ಸಮುದಾಯಗ ಬದುಕುವ ಭೌಗೋಳಿಕತೆಲಿ ಆಟಿ-ಸೋಣ ತಿಂಗಳ್ಲಿ ಜಡಿ ಕೂಟ ಮಳೆ ಸುರ್ದದೆ. ಆದರೆ ಈ ವರ್ಷ ಮಳೆ ಅನಿಸ್ ಕಡಿಮೆ. ಆದರೂ ಆಟಿಯ ಸಾಂಪ್ರದಾಯಿಕ ಜೀವನ ನಡೆಸುವಲ್ಲಿ ಅಂತಹ ವ್ಯತ್ಯಾಸ ಏನ್ ಆತ್ಲೆ. ಹಬ್ಬ-ಹರಿದಿನ ನಂಬಿಕೆ- ಆಚರಣೆಗ ನಿಂತತ್‌ಲೆ.

ಆಟಿಂತೇಳಿರೆ ಒಂದು ರೀತಿನ ವೈಪರೀತ್ಯದ ಗಡುವಿನ ಕಾಲ. ಆಟಿ ಕೆಲ ವೈಶಿಷ್ಟ್ಯಗಳ್‌ಂದ ಕೂಡ್ದ ಸಮಯ. ಮುಖ್ಯಂತೇಳ್ರೆ ಋತು ಮಾನದ ಮತ್ತು ಉತ್ಪಾದನೆಲಿ ಸ್ಥಿತ್ಯಂತರ ಪಡುವ ಈ ಕಾಲದ ಕುರ್ತ್ ಮುಖ್ಯವಾಗಿ ಆಹಾರದ ಕೊರತೆ, ಹವಾಮಾನದ ಏರ್- ಪೇರ್, ಇದರ್‌ಂದ ಉಂಟಾಗುವ ರೋಗ ರುಜಿನಗಳ್‌ಂದ ಮಾನವನ ಮನಸ್ ದುರ್ಬಲ ಆದೆ. ಧಾರಾಕಾರ ಸುರ್ವ ಮಳೆ- ಹಾಂಗೆನೆ ಸೋಣ ಸುರ್ವಾಗುವ ಹೊತ್ತ್‌ನ ಬಿಸ್‌ಲ್ ಇವೆಲ್ಲಾ ಮೊಂಸಂಗೆ ತಾಪತ್ರಯ ತಂದ್ ಹಾಕುವೆ. ಒಂದು ಬಗೆನ ಭಯ ದಾರುಣತೆಯ ಅನುಭವಕ್ಕೆ ಜನಗ ತುತ್ತಾದವೆ. ಹಾಂಗಾಗಿ ಆಟಿಯ ಕುರಿತು ಜನ ಹಲ ಬಗೆನ ನಂಬಿಕೆಲಿ ಆಚರಣೆಗ ನಡ್ಸ್‌ವೆ. ತಿನ್ನುವ ಆಹಾರದ ಬಗ್ಗೆನ್ ಬೇರೆ ದಿನಂದ ಭಿನ್ನವಾಗಿ ಅಡುಗೆ ಮಾಡುವೆ; ತಿನ್ಸ್‌ಗಳ ತಯಾರ್ಸುವೆ.

ಆಟಿಯ ಬಗ್ಗೆ ಜನಗ ಹಲ ನಂಬಿಕೆನ ಇಟ್ಟ್‌ಕೊಂಡೊಳೊ. ಆಟಿಯ ಹಾಳೆ ಮನೆಗೆ ಹಾಳ್. ಆಟಿಲಿ ಸತ್ತರೆ ನರಕ ಪ್ರಾಪ್ತಿ. ಆಟಿಲಿ ಮದುರಂಗಿ ಇಸಿಕಾಗದ್. ಆಟಿಲಿ ಮದುವೆ ಮಾಡಿಕ್ಕಾಗದ್. ಆಟಿಲಿ ಗಿಡ ನೆಟ್ಟರೆ ಅದ್ ಬದುಕುದುಲೆ. ಇಂತಹ ನಂಬಿಕೆಗೆಲ್ಲಾ ಆಟಿಯ ಮಳೆ ಮತ್ತ್ ಬಡತನನ ಕೇಂದ್ರೀಕರಿಸಿ

ಹುಟ್ಟಿಕೊಂಡೊಳೊ. 'ಆಟಿಲಿ ಅಟ್ಟ ಗುಡ್ಡೊಕು. ಈ ನುಡಿಗಟ್ಟ್ ಕೂಡ ಆಟಿಲಿ ಸಂಗ್ರಹಿಸಿಟ್ಟ ಆಹಾರ ಧಾನ್ಯಗಳೆಲ್ಲಾ ಮುಗ್ದುಟಾಂತೇಳ್ವ ಕುರಿತಾಗಿಯೇ ಮಾತಾಡ್ದೆ. ಆಟಿನ ಬಿಸಿಲ್ಗೆ ಆನೆನ ಬೆನ್ನ್ ಕೂಡ ಒಡ್ಯೊದು. ಆಟಿನ ಬಿಸಿಲ್ ಚಮ್ಮಾರಂಗೆ ಒಳ್ಳೆದ್. ಈ ಮಾತ್ ಆಟಿ ತಿಂಗಳ್ನ ಬಿಸಿಲ ಖಾರನ ಹೇಳ್ದೆ. ಆಟಿಲಿ ನಡೆವ ಆಚರಣೆ ಎಂದರೆ ಆಟಿ ಅಮಾಸೆನ ಸ್ನಾನ ಮಾತ್ರ. ಉಳಿದಂತೆ ಯಾವ ಆಚರಣೆನೂ ನಡಿಯೋದ್ಲೆ. ಆಟಿ ತಿಂಗ ರೋಗ ರುಜಿನ ಜಾಸ್ತಿ ಇರೋ ಕಾಲಂತೇಳಿ ಜನಗ ಭಾವಿಸ್ಯೊಳೊ. ಆಟಿಲಿ ಕಳೆಂಜನ ಕುಣಿತ ಮನೆ ಮನೆ ಬಂದದೆ. ಈ ಆಟಿ ಕಳೆಂಜನ ರೂಪ ನೋಡಿರೆ ಮಂತ್ರವಾದಿ ತರ ಇದ್ದದೆ. ಮಾಂತ್ರಿಕನಿಗೆ ರೋಗ ರುಜಿನ ಇತ್ಯಾದಿ ಮಾರಿಕಳೆವ ಶಕ್ತಿ ಉಟ್ಟೆಂದ್ ನಮ್ಮವು ನಂಬಿಯೊಳೊ. ಈ ಕಾರಣ ಆಟಿಲಿ ಕಳೆಂಜನ ಆಚರಣೆ ನಡ್ದದೆ. ಇಂದ್ ಆಟಿ ಹಿಂದಿನಂಗೆ ಇಲ್ಲೆ. ಗದ್ದೆ ಬೆಳೆ ಇರಿಕನ ಆಟಿಲಿ ವಿಶೇಷತೆಗ ಇದ್ದೊ. ಇಂದ್ ಭತ್ತ ಬೆಳೆವಂವ ಇಲ್ಲೆ; ಆಟಿನ ಆಚರಣೆ ಸಹ ಇಲ್ಲೆ. ಹಾಂಗಾಗಿ ಈಗ ಎಲ್ಲವೂ ಸೇರಿ ಆಟಿ ಉತ್ಸವಂತೇಳ್ವ ಜಂಬರನ ನಡೆಸುವಂತಾಗುಟು.

ಈ ಹಿಂಗಾರ ಸಂಚಿಕೆಲಿ ಕತೆ, ಕವನ, ಸಂಸ್ಕೃತಿ, ಚಿಂತನೆಗ, ಹರಟೆ, ಪ್ರಬಂಧಂತೇಳ್ವ ಬರಹಗ ಸಂಕಲ್‌ಸ್ಯೊಳೊ. ನಮ್ಮ ಅರೆಭಾಸಿಕ ಬರಹಗಾರರ್ ಈ ಬಗೆನ ಬರಹಗ ಬರೆನಿಂತೇಳಿ ನಾವು ಕೇಳಿಕಂಡ ಹಾಂಗೆ ಬರ್ದ್ ಕಳ್ಸಿಯೊಳೊ. ಕಥೆ ಕವನಗಳೊಟ್ಟಿಗೆ ವರ್ತಮಾನದ ಸಂಗತಿಗಳಿಗೆ ಒತ್ತ್ ಕೊಟ್ಟ್ ವೈಚಾರಿಕ ಹಿನ್ನೆಲೆನ ಬರಹಗಳ್ ಹೆಚ್ಚೆಚ್ಚ್ ಬಂದರೆ ನಮ್ಮ ಹಿಂಗಾರ ಸಂಚಿಕೆನು ಹೆಚ್ಚ್ ಮೌಲಿಕ ಆದೆಂತ ನಮ್ಮ ಅನಿಸಿಕೆ. ಈ ಸಂಚಿಕೆಗೆ ಮಸ್ತ್ ಜನ ಹಿರಿ– ಕಿರಿಯ ಬರಹಗಾರರ್ ಚುಟುಕು, ಗಾದೆ, ಅಡುಗೆ, ಕತೆ, ಕವನ ವೈಚಾರಿಕ ಬರಹ ನೀಡಿ ಸಹಕರಿಸ್ಯೊಳೊ. ಪ್ರತಿ ಸಂಚಿಕೆಲಿ ಒಬ್ಬ ಹಿರಿಯ ಬರಹಗಾರ, ಕಲಾವಿದ ಅಲ್ಲರೆ ಸಾಮಾಜಿಕ ವ್ಯಕ್ತಿನ ಪರಿಚಯ ಇರೊಕುಂತೇಳ್ವ ಇರಾದೆಲಿ ಈ ಸರ್ತಿನ ಸಂಚಿಕೆಲಿ ಹಿರಿಯ ಜೀವ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಎಲ್ಲಕ್ಕಿಂತಲೂ ಮಿಗಿಲಾಗಿ ಅರೆಭಾಷಿಕ ಸಾಹಿತಿಯಾಗಿರುವ ಎಂ.ಜಿ. ಕಾವೇರಮ್ಮನವರ ಕುರ್ತ್ ಶ್ರೀಮತಿ ಸಂಗೀತ ರವಿರಾಜ್ ಬರ್ದ ಲೇಖನ ಸಂಕಲನ ಆಗುಟು.

ಈ ಸಂಚಿಕೆನ ಹೊರ ತಾಕೆ ಅಕಾಡೆಮಿ ಅಧ್ಯಕ್ಷರ್, ರಿಜಿಸ್ಟ್ರಾರ್, ಸರ್ವ ಸದಸ್ಯರ್ ಸಹಕರಿಸ್ಯೊಳೊ. ಬರಹಗಾರರ್ ಮುತುವರ್ಜಿ ಮತ್ತು ಭಾಷೆನ ಪ್ರೀತಿಲಿ ತಮ್ಮ ಲೇಖನಗ ನೀಡಿ ಸಂಚಿಕೆನ ಮೌಲ್ಯ ಹೆಚ್ಚಿಸ್ಯೊಳೊ. ಸಂಚಿಕೆನ ಮುಖಪುಟ ವಿನ್ಯಾಸ ಮಾಡ್ದ ವಿನಯ್ ಮತ್ತು ಲೋಹಿತ್ ಬೆಂಗಳೂರು, ಪ್ರಿಂಟ್ ಹಾಕುವಲ್ಲಿ ಸಹಕರ್ಸಿದ ಮಡಿಕೇರಿನ ಶ್ರೀಕೃಷ್ಣ ಕಂಪ್ಯೂಟರ್ ಮತ್ತು ಪ್ರಿಂಟ್ಸ್‌ನವುಕೆ, ಅಕ್ಷರ ಜೊಡಣೆಲಿ ಸಹಕರಿಸಿದ ಚೆನ್ನಕೇಶವ ಜೆರಾಕ್ಸ್‌ನ ಶ್ರೀಮತಿ ಪುಷ್ಪಲತಾ ಎ., ಅಕಾಡೆಮಿ ಸಿಬ್ಬಂದಿ ಶ್ರೀಮತಿ ಜ್ಯೋತಿ, ಪ್ರತಿ ತಿದ್ದುವಲ್ಲಿ ಸರೋಜ ಪಿ. ಕಣಿಯೂರು, ಎಂ.ಜಿ.ಕಾವೇರಮ್ಮ, ಸಂಪಾದಕತ್ವದಲ್ಲಿ ಮೋಹನ ಸೋನ ಕೈ ಜೊಡ್ಸಿಯೊಳೊ. ಸಹಕರಿಸಿದ ಎಲ್ಲೊವ್ಕೆನೂ ತುಂಬು ಹೃದಯದ ಕೃತಜ್ಞತೆಗ.

ತಾ. 10.11.2016

**ಡಾ. ಪೂವಪ್ಪ ಕಣಿಯೂರು**



# ಹಿಂಗಾರ ಒಪ್ಪೆಕನ

## ಕತೆಗ



## ಕವನಗ



ವ್ಯಕ್ತಿ ಪರಿಚಯ

# ಶ್ರೀಮತಿ ಎಂ.ಜಿ. ಕಾವೇರಮ್ಮ

ಶ್ರೀಮತಿ ಸಂಗೀತ ರವಿರಾಜ್

ತಮ್ಮ ಜೀವಮಾನವಿಡೀ ದಣಿವಾಗದಂತೆ ಸಮಾಜಕ್ಕಾಗಿ ದುಡ್ಡ ಶ್ರೀಮತಿ ಎಂ.ಜಿ ಕಾವೇರಮ್ಮನವು ಈಗ ಇಳಿವಯಸ್ಸ್‌ಲಿ ಸಾರ್ಥಕ ಜೀವನ ನಡಸ್ತ ಒಳ. 1955ರ್ಲಿ ಸಮಾಜಸೇವೆಗೆ ಇಳಿಯಕಾಕನ ಇವ್ಕೆ ಕೇವಲ 16 ವರ್ಷ ಆಗಿತ್ತ್. 1955ರ್ಲಿ ಭೂದಾನ ಚಳುವಳಿ ನಡ್ಸುವ ವಿನೋಭಾಜಿ ಪಾದಯಾತ್ರೆಲಿ ಸುಳ್ಯಕ್ಕೆ ಬಾಕನ, ಅವರ ಕಾರ್ಯಕರ್ತೆಯರ ಮನೆಮನೆಗೆ ಕರ್ಕಂಡ್ ಹೋಗ್ವ ಕೆಲ್ಸ ಇವರ ಪಾಲಿಗಿತ್ತ್. ಸುಳ್ಯದವರೊಟ್ಟಿಗೆ ಸೇರಿ ವಿನೋಭಾಜಿ ಭೂಮಿ ಪಡ್ದ್ ದೀನ ದಲಿತರಿಗೆ ಆ ಜಾಗೆನೆಲ್ಲಾ ಹಂಚಿಕೆ ಮಾಡ್ದೊ. ಈಗಲೂ ಆ ಜಾಗೆನ ವಿನೋಭಾನಗರ ಅಂತನೇ ಕರ್ದವೆ. ಹದ್‌ನಾರರ ಹರೆಯಲಿ ಇದರ್‌ನೆಲ್ಲಾ ಕಣ್ಣಾರೆ ಕಂಡ ಕಾವೇರಮ್ಮನವ್ಕೆ ವಿನೋಭಾಜಿಯ ಭೂದಾನ ಚಳುವಳಿ ಇವ್ಕೆ ಪ್ರಭಾವ ಬೀರ್ದ ಅಂಶ. ತಮ್ಮ ಓದುವ ಸಮಯಲಿಸ ನಾಯಕತ್ವ ಗುಣನ ಬೆಳ್ಸಿಕಂಡ್ ಸಮಾಜ ಸೇವೆಯ ಗುರಿ ದಾರಿನತ್ತ ನಡ್ಡ ಅಪರೂಪದ ಸಮಾಜ ಸೇವಕಿ ಮತ್ತು ಲೇಖಕಿ ಶ್ರೀಮತಿ ಎಂ.ಜಿ ಕಾವೇರಮ್ಮನವು.

ಸೂಂತೋಡು ಅಪ್ಪಣ್ಣ ಗೌಡ ಮತ್ತು ಮುದ್ದಮ್ಮ ದಂಪತಿಗಳ ಮಗ್‌ಳಾಗಿ 1939 ಜುಲೈ 14 ರಂದ್ ಹುಟ್ಟಿದ ಕಾವೇರಮ್ಮ ತಮ್ಮ ಹೆಚ್ಚಿನ ಓದುನೆಲ್ಲಾ ಸುಳ್ಯಲಿ ಮುಗ್ಸಿ, ಮೈಸೂರುನ ಸೈಂಟ್ ಫಿಲೋಮಿನಾ ಕಾಲೇಜ್‌ಲಿ ಪದವಿಪೂರ್ವ ಶಿಕ್ಷಣ ಪಡ್ದೊ. 1960 ಜೂನ್ 3ರಂದ್ ಮಾವಾಜಿ ಗೋಪಾಲಕೃಷ್ಣರೊಟ್ಟಿಗೆ ಹೊಸ ಬದ್ಕಿಗೆ ಕಾಲಿರ್ಸಿದ ಹೊತ್ತು. ಗಂಡ ಹೈಸ್ಕೂಲ್ ಮುಖ್ಯೋಪಾಧ್ಯಾಯರಾಗಿದ್ದವು. ಸಮಾಜ ಸೇವೆಲಿಸ

ಆಸಕ್ತಿ ಇದ್ದವು ಸಮಾನಮನಸ್ಕರಾದ ಇವರ ಗಂಡನ ಬೆಂಬಲ ಇದ್ಕೆ ಇದ್ದದ್ ಸಮಾಜಸೇವೆಗೆ ಅನುಕೂಲನೇ ಆಗಿತ್ತ್. ಮೂರ್ ಹೆಣ್ಣ್ ಒಂದ್ ಗಂಡ್ ಮಕ್ಕಳ ಅಮ್ಮ ಆಗಿ ಆದರ್ಶ ಗೃಹಿಣಿಯು ಆಗಿದ್ದೊ.

ಇವರ ಸಮಾಜ ಸೇವೆನ ತುಡಿತ ಸಮಾಜಕ್ಕೆ ಅರಿವಾದರ ಪರಿಣಾಮಲಿ ಮೊದಲ ಚುನಾವಣೆಲಿಯೇ ಪಕ್ಷೇತರ ಅಭ್ಯರ್ಥಿಯಾಗಿ ನಿಂತ್ ಜಯಗಳ್ಸಿದ್ದ್ ಇವರ ಹೆಗ್ಗಳಿಕೆ. 1968 ರ್ಲಿ ಪಂಚಾಯತ್ ಬೋರ್ಡ್‌ನ ಈ ಪ್ರಥಮ ಚುನಾವಣೆಲಿ ಸ್ಪರ್ಧಿಸಿ ತಾಲುಕು ಬೋರ್ಡ್ ಸದಸ್ಯೆ ಆಗಿ ಚುನಾಯಿತರಾದೊ. 1971 ರ್ಲಿ ಜನಸಂಘ ಪಕ್ಷಕ್ಕೆ ಸೇರ್ದ ಕಾವೇರಮ್ಮನವು, ರಾಷ್ಟ್ರೀಯ ಸ್ವಯಂ ಸೇವಕಾ ಸಮಿತಿನ ಕಾರ್ಯಕರ್ತೆ ಆಗಿ ಎಡೆ ಬಿಡದೆ ಸಮಾಜಕ್ಕಾಗಿ ಕೆಲ್ಸ ಮಾಡ್ದೊ. ಸಂಘಟನೆನಂತಹ ಕೆಲ್ಸನ ಲೀಲಾಜಾಲವಾಗಿ ಮಾಡ್ತಿದ್ದ ಕಾವೇರಮ್ಮನವು ಜನಸಂಘ ಮತ್ತೆ ಸೇವಿಕಾ ಸಮಾವೇಶ ಅಲ್ಲಲ್ಲಿ ನಡಿಯಕಾಕನ ಹೆಂಗಸರ್‌ಗಳ ಒಟ್ಟು ಸೇರ್ಸಿ ಅವರೊಟ್ಟಿಗೆ ಸಮಾವೇಶಲಿ ಪಾಲ್ಗೊಳ್ಳ್‌ತ್ತಿದ್ದೊ. ಮುಂದೆ ರಾಜಕೀಯಕ್ಕೆನೆ ಸೇರಿ ಸಮಾಜ ಸೇವೆ ಮಾಡಕುಂತ ಇದ್ದ ಅವರ ನಿಲುವಿನ ಬದಲ್ ಮಾಡಿಕಂಡ್, ಮಿಕ್ಕ ಬದುಕುಲಿ ರಾಜಕೀಯಂದ ದೂರ ಇದ್ದ್ ಸಮಾಜಸೇವೆಗೆ ತಮ್ಮ ಸಮಯನ ಮೀಸಲಿಟ್ಟೊ. ಇದಿಕ್ಕೆ ಮುಖ್ಯ ಕಾರಣ ಕುಟುಂಬನ ನಿರ್ವಹಿಸಕಂಡ್ ಮಕ್ಕಳ ಏಳಿಗೆಗೆಸ ಸಮಯ ಹೊಂದಿಸಿಕಂಡ್ ಗೃಹಣಿಯ ಕರ್ತವ್ಯನಸ ಇವು ಮರ್ತ್ತ್ಲೆ.

ಮುಂದೆ ಸುಳ್ಯದ ಹತ್ತ್ ಹಲವು ಸಂಘಸಂಸ್ಥೆಗಳಿಗೆ ಸಕ್ರಿಯ ಸದಸ್ಯ ಆಗುದರ ಮೂಲಕ ಸೇವೆನೆ ಉಸ್ರು ಎಂಬುದರ ಖಚಿತ ಪಡ್ಸಿದೊ. ಸುಳ್ಯ ಪಂಚಾಯತ್ ಮಂಡಳಿ ಸದಸ್ಯೆ ಆದೊ ನಗರ ವ್ಯಾಪ್ತಿಲಿ ಮೂರ್ ಶಾಲೆಗಳ ಅಭಿವೃದ್ಧಿ ಸಮಿತಿನ ಸದಸ್ಯೆ ಆಗಿ ಶೈಕ್ಷಣಿಕ ಕ್ಷೇತ್ರಲಿಸ ತಮ್ಮ ಛಾಪು ಮೂಡಿಸಿಕಂಡೊ. ಸುಳ್ಯ ತಾಲೂಕು ಮಹಿಳಾ ಒಕ್ಕೂಟದ ಕಾರ್ಯದರ್ಶಿಯಾಗಿ, ಸುಳ್ಯ ತಾಲೂಕು ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘದ ಆಡಳಿತ ಮಂಡಳಿ ಸದಸ್ಯೆಯಾಗಿ ಸಹಕಾರಿ ಕ್ಷೇತ್ರಲು ಸೇವೆ ಸಲ್ಲಿಸ್ಯೊಳೊ. ರಾಜ್ಯ ಗ್ರಂಥಾಲಯ ಮಂಡಳಿಯ ಉಪಾಧ್ಯಕ್ಷೆಯಾಗಿ, ಸುಳ್ಯ ಪೊಲೀಸ್ ಠಾಣಾ ನಾಗರಿಕಾ ರಕ್ಷಣಾ ಸಮಿತಿಯ ಸದಸ್ಯೆಯಾಗಿ ಆಹರ್ನಿಶಿ ಸಮಾಜಕ್ಕಾಗಿ ದುಡ್ದೊಳೊ. ಸುಳ್ಯಲಿ ಮಹಿಳಾ ಸಮಾಜ ಪ್ರಾರಂಭ ಆಕನ ಸದಸ್ಯೆಯಾಗಿ ಸೇರಿ ನಂತರ ಅಧ್ಯಕ್ಷೆ ಆಗಿ ಮಹಿಳಾ ಮಂಡಲ ಕಾರ್ಯ ಚಟುವಟಿಕೆಗಳ ಏಳಿಗೆಗಾಗಿ ಎಡೆಬಿಡದೆ ಕೆಲಸ ನಿರ್ವಹಿಸ್ಯೊಳೊ. ಅವರ ಕಾರ್ಯದಕ್ಷತೆ ನೋಡಿ ಉಳ್ದೆಲ್ಲಾ ಮಹಿಳಾಮಣಿಗ ಮತ್ತೆ ವಾಪಾಸ್ ಜವಾಬ್ದಾರಿ ತಕಣುಕುಂತ ಒತ್ತಾಯ ಮಾಡ್ತಿದ್ದೊ. ಮತ್ತೆ ಮುಂದೆ ಹನ್ನೆರಡು ವರ್ಷಗಳ ಕಾಲ ಮಹಿಳಾ ಮಂಡಲದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದೊ. ಇಷ್ಟು ಸಂಘ ಸಮಿತಿಗಳಿಗೆ ಹೆಸರಿಗೆ ಮಾತ್ರ ಸದಸ್ಯೆ ಆಗಿರದೆ. ಪ್ರತಿ ಹಂತಲಿಸ ಜನಕ್ಕೆ ಬೇಕಾದ ಸಹಾಯಮಾಡಿ, ಸೌಲಭ್ಯ ಒದಗಿಸಿಕೊಟ್ಟ್ ತಮ್ಮ ಹುದ್ದೆಗೆ ಸ್ವಲ್ಪಸ ಲೋಪಬಾರದಂಗೆ ಯಶಸ್ವಿಯಾಗಿ ಕೆಲಸ ನಿರ್ವಹಿಸ್ಯೊಳೊ.

ಇಂತಹ ಸೇವಾ ಮನೋಭಾವದ ಕಾವೆರಮ್ಮನವೆ ಸಾಂಸ್ಕೃತಿಕ ಚಟುವಟಿಕೆಗಳ್ಲಿ ಮತ್ತ್ ಅವುಗಳ ಬೆಳ್ಸುದರ್ಲ್ಲಿ ವಿಶೇಸ ಆಸಕ್ತಿ ಇತ್ತ್. ಸಂಗೀತ ಮತ್ತ್ ಭರತನಾಟ್ಯಲಿ ಆಸಕ್ತಿ ಇದ್ದ್ ಜ್ಞಾನಕ್ಕೆ ತಕ್ಕಷ್ಟು ಇವುಸ ಕಲ್ತಳೊ. ಕಲೆ, ಕಸೂತಿ, ಚಿತ್ರಕಲೆ ಮತ್ತು ಕವನ ರಚನೆಲಿಸ ಪರಿಣತಿನ ಹೊಂದ್ಯೊಳೊ. ತಮ್ಮ ವಿದ್ಯಾಭ್ಯಾಸದ ಸಂದರ್ಭಲಿ ಇವುಗಳ್ಲಿ ಎಲ್ಲ ಪ್ರಥಮ ಸ್ಥಾನ ಪಡೆತ್ತಿದ್ದೊ ಎಂಬ್ರಾಯಿಡರಿ, ಗ್ಯಾಸ್‌ಪೈಟಿಂಗ್, ಕ್ರೋಷಾಗಳ್ಲಿ ಸ ಪರಿಣತಿ ಹೊಂದಿದ ಇವು ಸುಮಾರ್ ಬಹುಮಾನ ಪಡ್ದಳೊ. ತಾವು ಮಾಡ್ದಂತಹ ವಸ್ತುಗಳೆಲ್ಲಾ ಸರ್ರ್ಯಾಗಿ ಸಂಗ್ರಹಿಸಿ ಇಸಿಕೆ ಆತ್ಲೆ ಎಂಬುದರ ಬೇಜಾರಲಿ ಹೇಳ್ದ ಇವು ತಮ್ಮ ಪುರುಸೊತ್ತುನ ಸಮಯಲಿ ಈಗಲೂ ಈ ಹವ್ಯಾಸಗಳ್ಲಿ ಕೆಲವುದರ ಮುಂದುವರ್ಸಿಕಂಡ್ ಬಂದೊಳೊ. ಹಿಂದಿ ಪ್ರಚಾರ ಸಮಿತಿನ ಪ್ರಬಂಧ ಸ್ಪರ್ಧೆಲಿ ಪ್ರಥಮ ಸ್ಥಾನ ಪಡ್ದಿದ್ದೊ. ಇಂತಹ ಚಟುವಟಿಕೆಗಳ್ಲಿಸ ಆಸಕ್ತಿ ಇದ್ದರಂದ ಕಾವೇರಮ್ಮನವು ಬಾಲವಾಡಿ ಮಕ್ಕಳಿಗೆ ಸುಮಾರ್ ಚಟುವಟಿಕೆಗಳ ಹಮ್ಮಿಕಣ್ತಿದ್ದೊ. ಭರತನಾಟ್ಯ ತರಬೇತಿ ಕೇಂದ್ರ ಶಿಶುಪಾಲನಾ ಕೇಂದ್ರ, ಗೊಂಬೆ ತಯಾರಿಕಾ ಕೇಂದ್ರ ಹೊಲಿಗೆ ಯಂತ್ರ ವಿತರಣಾ ಕೇಂದ್ರ, ಸರ್ವೊದಯ ಕಾರ್ಯಕರ್ತರ ಶಿಬಿರ, ಕುಟುಂಬ ಕಲ್ಯಾಣ ಯೋಜನಾ ಶಿಬಿರ ಹೀಂಗೆ ಹಲವಾರು ಕಾರ್ಯಕ್ರಮ ಹಮ್ಮಿಕಂಡ್ ಯಶಸ್ವಿ ಕಂಡೊಳೊ. ಇದರೊಟ್ಟಿಗೆ ಸಂಸಾರದ ಹೊಣೆನ ಕರೆಗೆ ಮಾಡದೆ ಮಕ್ಕಳ ವಿದ್ಯಾಭ್ಯಾಸ ಮತ್ತೆ ಅವರ ಹವ್ಯಾಸಗಳ ಜವಾಬ್ದಾರಿ ನೋಡಿಕಣ್ತಿದ್ದೊ. ಮನೆ ಮುಂದೆ ಅಂಗಳಲಿ ಲಾಯ್ಕಿದ ಹೂ ತೋಟ ಮಾಡಿದ್ದೆ ಅಂತ ಖುಷಿಂದ ಹೇಳ್ವೆ. ಪಾಕ ಪ್ರವೀಣೆ ಆಗಿ ಅಡಿಗೆಲಿಸ ಎತ್ತಿದ ಕೈ ಇವರ್ದ್. ಮನೆಗೆ ಬರ್ತಿದ್ದ ಎಷ್ಟೋ ನೆಂಟ್ರಗಳ, ಬೇರೆ ಅತಿಥಿಗಳ ಊಟೋಪಚಾರನ ಖುಷಿಂದ ನೋಡಿಕಣ್ತಿದ್ದೊ. ವಿಸೇಸಾಂತ ಹೇಳ್ರೆ ಇವರ ಒಳಗಿದ್ದ ಸಾಹಿತಿ ಮನ್ಸ್ ಇವ್ಕೆ ವಿರಾಮದ ಜೀವನ ಸಿಕ್ಕುವರೆಗೆ ಹೊರಗೆ ಬಾಕೆ ಅವಕಾಶನೆ ಇತ್ಲೆ. ತಮ್ಮ ಗಂಡ ನಿವೃತ್ತಿ ಪಡ್ದ ಮೇಲೆ ಅವರ ಕ್ಷೇಮ ಸಮಾಚಾರ ನೋಡಿಕಣುವ ದೃಷ್ಟಿಂದ ಸುಮಾರು ಐವತ್ತು ವರ್ಸ ಕಳ್ದ ಮೇಲೆ ಸಮಾಜಮುಖಿಯಾದ್ದವು ಕೊಂಚ ವಿಮುಖವಾದೊ. ತಮ್ಮ ಆರೋಗ್ಯದ ದೃಷ್ಟಿಂದಸ, ಮಕ್ಕಳ ಜವಾಬ್ದಾರಿಗಳಿಗೆ ಹೆಗಲ್ ಕೊಡಿಕೆ ಇದ್ದಂರ್ದ ಹಂಞ ಮಟ್ಟಿಗೆ ಸಮಾಜ ಸೇವೆಂದ ದೂರ ಸರ್ದ್ದೊ. ಇಳಿವಯಸ್‌ಲಿ ಅತಿ ಹೆಚ್ಚ್ ಬರಿಯಕೆ ಸುರು ಮಾಡ್ದ ಇವು 'ಒಳ ಹರಿವು' ಎಂಬ ಕವನಸಂಕಲನ ಲೋಕಾರ್ಪಣೆ ಮಾಡ್ಯೊಳೊ. ತೀರಾ ಇತ್ತೀಚೆಗಷ್ಟೆ ಇವೆ ಅರೆಭಾಸೆ ಕವನಸಂಕಲನ 'ಸರ್ರಾಲೆ' ಮತ್ತೆ ಅಜ್ಜಪ್ಪನ ಕತಾಭಂಡಾರದ ಹೆರ್ಕಿದ ಕತೆಗ' ಎಂಬ ಎರ್ಡ್ ಪುಸ್ತಕನ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿವತಿಂದ ಬಿಡುಗಡೆ ಮಾಡ್ಯೊಳೊ. ಸುಮಾರ್ ಸೋಭಾನೆಗಲ ಬರ್ದ್ಲೊಳ ಮತ್ತು ಸಂಗ್ರಹ ಮಾಡ್ಯೊಳೊ. ಅರೆಭಾಸೆ ಗಾದೆಗಳ ಲೀಲಾಜಾಲವಾಗಿ ಹೇಳ್ವ ಇವು ಎಲ್ಲರೊಟ್ಟಿಗೆಸ ಅರೆಭಾಸೆಲಿ ಸಂವಹನ ಮಾಡ್ದು ವಿಸೇಸ. ಇವರ ಜೀ ವನದ ಪೂರ್ವಾರ್ಧದ ಕುರ್ತು ಬರ್ದ 'ನೆಂಪುಗಳ ರಂಗೋಲಿ' ಎಂಬ ಸಂಪುಟನ ಈಗ ಪುಸ್ತಕ ರೂಪಲಿ ತರುವ ತಯಾರಿ ಮಾಡ್ತ

ಒಳ. ಇತ್ತೀಚೆಗಿನ ದಿನಗಲ್ಲಿ ವಯೋಸಹಜ ಸುಸ್ತುಂದಾಗಿ ಮನೆಲಿ ಇರ್‍ದೊಂರ್ದ ಸಾಹಿತ್ಯಿಕ ಕೆಲಸಗಳಿಗೆ ಓದು – ಬರಹಕ್ಕೆ ಹೆಚ್ಚ್ ಗಮನ ಕೊಟ್ಟವೆ. ಇವರ ಅದೆಷ್ಟೋ ಅರೆಭಾಸೆ ಕವಿತೆಗಳಿಗೆ ರಾಗ ಸಂಯೋಜನೆ ಮಾಡಿ ಆಗಿಟು. ಅತ್ಯಂತ ಸ್ನೇಹ  ಜೀವಿ ಆದ ಕಾವೇರಮ್ಮನವ್ಕೆ ಗೆಳತಿಗೆ ತುಂಬಾ ಜಾಸ್ತಿ. ಎಲ್ಲರ್‍ನ ಪ್ರೀತಿಂದ ಕಾಂಬೊದರಂದ ಪುಳ್ಳಿಕ, ಮಕ್ಕ, ನೆಂಟ್ರ್‍ಗ, ಗೆಳತಿಗ ಎಲ್ಲವೂ ಸ ಯಾಗೋಳು ಅವರ ಸಂಪರ್ಕಲಿಯೆ ಇದ್ದವೆ. ಮನೆಗೆ ಸಂಘ ಸಂಸ್ಥೆಗಳಿಗೆ ಪತ್ರಿಕೆಗಳಿಗೆ ಚಂದಾದಾರ ಮಾಡಿಕೆಂತ ಹೀಂಗೆ ಬಂದರುಸ ತುಂಬ ಸಂತೋಷಲಿ ಧನಸಹಾಯ ನೀಡಿ ಕಳ್ಸುವೆ. ಸಹಾಯ ಮಾಡುವ ಇವರ ಹುಟ್ಟು ಗುಣನೆ ಇಷ್ಟೆಲ್ಲಾ ನಿಸ್ವಾರ್ಥ ಸೇವೆಗೆ ಕಾರಣ. ತೀರಾ ಇತ್ತೀಚೆಗಿನವರೆಗೆಸ ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರಿಯ ವಿಶ್ವವಿದ್ಯಾಲಯದ ಶಿಷ್ಯೆಯಾಗಿ ತಮ್ಮ ಕೈಲಾದಷ್ಟು ಸಮಾಜಸೇವೆ ಮಾಡ್ಯೊಳೊ.

ಸೇವೆನೆ ಉಸಿರುಂತ ಬಧ್ಕಿದ ಇವ್ಕೆ ದಕ್ಷಿಣ ಕನ್ನಡ ಜಿಲ್ಲಾ ಏಳನೆ ಕನ್ನಡ ಸಾಹಿತ್ಯ ಸಮ್ಮೇಳನಲಿ ಮತ್ತು ಸುಳ್ಯ ತಾಲೂಕು 19ನೇ ಕನ್ನಡ ಸಾಹಿತ್ಯ ಸಮ್ಮೇಳನಲಿ ಸಮಾಜಸೇವೆಗಾಗಿ ಸನ್ಮಾನ ಮಾಡ್ಯೊಳೊ. ಭೇರೆ ಸಂಸ್ಥೆಗಳಂದ ಹಲವು ಸನ್ಮಾನ, ಪ್ರಶಸ್ತಿಗಳ ಪಡ್ದಲೊ. ಪತ್ರಿಕೆಗಲ್ಲಿ ಇವರ ಸಂದರ್ಶನಗ ಪ್ರಕಟ ಆಗಿಟು .ಸಮಾಜ ಸೇವೆ ನಂಗೆ ಸುಲಭ ಆಗಿತ್ಲೆ. ಸುಮಾರು ತೊಂದರೆಗಳ ಎದ್‌ರಿಸಿಕಂಡ್, ಎಲ್ಲನಸ ಧೈರ್ಯಲಿ ದಾಟಿಕಂಡ್ ನಾನ್ ಸಮಾಜದ ಮಧ್ಯಲಿ ಕಳ್ದದ್ ಅಂತ ಹೇಳಿಕೆ ಮರೆಯದುಲ್ಲೆ. ಇವು ರಾಜಕೀಯಲಿ ಗುರುತಿಸಿಕಂಡರೂ ಸಮಾಜಸೇವಕಿ ಅಂತನೆ ಬಿಂಬಿತವಾದರ ನೋಡ್ರೆ ಇವರ ಕಾರ್ಯ ವೈಖರಿ ಹೇಗಿತ್ತ್ ಎಂಬುದು ಎಲ್ಲವುಕೆ ಅರ್ಥ ಆದೆ. ಈಗ ಸುಳ್ಯದ ಮಾವಾಜಿ ಮನೆ 'ನಿಸರ್ಗ'ಲಿ ಮಗ, ಸೊಸೆ, ಪಿಳ್ಳೆಗಳೊಟ್ಟಿಗೆ ವಿಶಾಂತಿ ಜೀವನಲಿ ಆರಾಮಲಿ ಒಳೊ.

* * * * *

ಅನುಭವ

# ನಮ್ಮವ್ವನ ನೆತ್ತಿಗೆ ಪೊಲ್ಲಿ ಬಿದ್ದ ನೆಂಪು

ಪ್ರೊ.ಎಸ್. ಸುಕುಮಾರ ಗೌಡ

ಇದ್ ಸುಮಾರ್ ಆರವತ್ತೈದ್ ವರ್ಷಗಳ ಹಿಂದೆನ ಸಂಗತಿ. ನಾ ಆಗ ನಾಲ್ಕನೆ ಕ್ಲಾಸ್ಲಿ ಇದ್ದೆ ಕಂಡದೆ. ಯಾಗೋಳು ನಾಂಗೆ ಒಂದಿನ ನಮ್ಮ ಅವ್ವ ಬೊಳ್ಪೊಳ್ಗಿಗೆ ಎದ್ದ್‌ದ್ ಮನೆನ ಎದ್‌ರ್ನ ಬಾಗ್ಲ್ ತೆಗಿಯಕನ ಪೊಲ್ಲಿ ಒಂದು ಟಪ್ಪಂತ ಅವ್ವನ ನೆತ್ತಿ ಮೇಲೆ ಬೀತ್. ನಾವು ಮಕ್ಕ ಯಾರ್ ಇನ್ನ್ ಎದ್ದತ್ತ್ಲೆ. ಅಪ್ಪನೂ ಅವ್ವನೂ ಮಾತಾಡ್ದು ಕೇಳ್‌ತಿತ್ತ್. ನಾ ಎದ್ದ್‌ದ್ ಅವ್ವನ ನೋಡಿರೆ ಅವ್ವ ಯಾಗೋಳು ನಾಂಗೆ ಇತ್ತ್ಲೆ. ಭಾರೀ ಬೇಜಾರ್ಲಿ ಇತ್ತ್. ನನ್ನ ನೋಡಿ ಅಳಿಕೆ ಸುರು ಮಾಡಿತ್ ನಂಗೆ ನಿಧಾನ್ಲಿ ವಿಸಯ ಗೊತ್ತಾತ್. ಪಂಚಾಂಗಲಿ ಗೌಳಿ ಪತನ ಶಕುನ ಇದರೆಲ್ಲಾ ನಾ ಮುಂದೇನೆ ಓದಿದಂವ. ನೆತ್ತಿ ಮೇಲೆ ಹಲ್ಲಿ ಬಿದ್ದರೆ ಮರಣಂತ ಅದರ್ಲಿ ಇತ್ತ್. ಅಪ್ಪನ ಹಕ್ಕಲೆ ಜೋತಿಷ್ಯ ಪುಸ್ತಕಗೆಲ್ಲಾ ಇದ್ದೊ. ಹಳೇ ಪಂಚಾಂಗಗಳ ಕಟ್ಟೇ ಇತ್ತ್. ಕೆಲವು ಜೋತಿಷ್ಯ ಪುಸ್ತಕಗಳ ನೋಡಿಕಂಡ್, ಗುಣ್ಸಿ ಕಳ್ದ್ ಅಪ್ಪ ಭಾರೀ ಗಂಭೀರಲಿ ಅವ್ವನೊಟ್ಟಿಗೆ ಹೇಳ್ದು ಕೇಳ್ತ್. "ಹೌದೋ, ಬಪ್ಪದ್ ತಪ್ಪದ್. ನಮ್ಮ ಗ್ರಾಚಾರ. ದೇವ್ರೆ ಕಾಪೊಡುಕ್. ಇಂದೇ ನಿನ್ನ ಮನೆಗೆ ಹೋಗಿ ಮನೆಯವರೆಲ್ಲಾ ನೋಡಿ ಮಾತಾಡ್ಸ್‌ಕಂಡ್ ನಾಳೆ ಬಾ" ಅಂತ ಅಪ್ಪ ಹೇಳ್ದೊ. ನನ್ನ ಮತ್ತ್ ತಂಗೆನ ತೊಬ್ಬಿಕಂಡ್ ಅವ್ವ ಮೊರ್ದ್ರ ನೆಂಪು ನಂಗೆ ಈಗಲೂ ಉಟ್ಟು. ಹಾಂಗೆ ಬೇಗ ಬೇಗ ಹಸ್‌ನ ಕರ್ ಬುಟ್ಟ್, ಅಡಿಗೆ ಮಾಡಿ ಹನುಮಾನ್ ಬಸ್ ಹತ್ತಿ ಹೋತ್. ಬಸ್ ಹತ್ತ್‌ವವರೇಗೆ ನಾವು ಅವ್ವನೊಟ್ಟಿಗೇ ಇದ್ದೊ.

ನಾ ಅಂದ್ ಶಾಲೆಗೆ ಹೋಗದೆ ಮನೆಲಿದ್ದೆ. ಅವ್ವಂಗೆ ಆದ ಸಂಗತಿನ ನೆನ್ಸಿ ನೆನ್ಸಿ ನಂಗೆ ದುಃಖ ಹೆಚ್ಚೆಚ್ಚ್ ಆಗ್ತಿತ್. ಅದರ

ತೋರ್ಸಿಕಣದೆ ದೇವರ ಗುಂಡದ ಮುಂದೆ ದೇವರಿಗೆ ಕೈ ಮುಗ್ದ್ ಅಳಿಕೆ ಸುರು ಮಾಡ್ದೆ. ಯಾರಿಗೂ ಗೊತ್ತಾಂಗದಾಂಗೆ ಒಬ್ಬನೇ ಇರ್‌ಕನ ಸೊಪ್ಪು ಹಾರ್ಸಿ ಹಾರ್ಸಿ, ದೇವ್ರಿಗೆ ಕೈ ಮುಗ್ದ್ ಮುಗ್ದ್ ಕಾಲಕಳ್ದೆ. ಸೊಪ್ಪು ಒಮ್ಮೆ ಮಂಕಣಿ ಬಿದ್ದರೆ ಇನ್ನೊಮ್ಮೆ ಕಂಕಣಿ ಬೀಳ್‌ತಿತ್ತ್. ಹಿಂಬೊತ್ ಹಿಂಬೊತ್ತಾಕಂಡ್ ಬಂದಾಂಗೆ ನಂಗೆ ಎದೆ ನಡ್ಗಿಕೆ, ತಲೆ ತಿರ್ಗಿಕೆಗೆ ಸುರು ಆತ್. ಕತ್ತಲೆ ಆಕಂಡ್ ಬಂದಾಂಗೆ ಅವ್ವನ ಹೆಜ್ಜೆ ಕೇಳಿದಾಂಗೆ ಆತಿತ್ತ್, ದೂರಂದ ನಮ್ಮ ಕರ್ದಾಂಗೆ ಆತಿತ್ತ್. ಕಣ್ಣ್ ಮುಂದೆ ಏನೇನೋ ಆಂಜಿದಾಂಗೆ ಆತಿತ್ತ್. ಅವ್ವ ಅಲ್ಲೇ ಸತ್ತೋತ್‌ಂತ ನನ್ನ ಮನಸ್ಲೇ ಆತ್. ನಾವುಗೆ ನೋಡಿಕಾತ್ಲೆಂತ ಮೊರ್ಬೆ. ಅವ್ವನ ಮಲ್‌ಗಿಸಿ ಉಕ್ಕಪ್ಪ ಮಾಮ್ಮವ್ವ ಎಲ್ಲವೂ ಮೊರ್ದುವ ದೃಶ್ಯ ಕಾಂಬತ್ತಿತ್ತ್. ಅಲ್ಲಿ ಸೇರ್ದೊವೆಲ್ಲಾ ಅತ್ತ್‌ಕಂಡ್ ಬಾಯಿಗೆ ನೀರು ಬಿಡುವ ದೃಶ್ಯ ಬೇಡ ಬೇಡಂತೇಳ್ರೂ ನನ್ನ ಕಣ್ಣಿಗೆ ಕಟ್ಟ್‌ತಿತ್ತ್. ಕಣ್ಣು ಮುಚ್ಚಿರೂ ಬುಟ್ಟರೂ ಅದೇ ಕಾಂಬೊದ್. ಅಂತೂ ಇಂತೂ ಅತ್ತ್‌ಕಂಡ್, ಅತ್ತ್‌ಕಂಡ್ ರಾತ್ರೆ ಕಳ್ದೆ. ರಾತ್ರೆ ಇಡೀ ನಿದ್ದೆ ಮಾಡ್‌ತ್ಲೆ. ಅಪ್ಪನೂ ಹೆಚ್ಚ್ ಮಾತಾಡ್‌ತ್ತ್ಲೆ. ಏನೆಲ್ಲಾ ಭಯಂಕರ ಯೋಚನೆಗೆ ಬಾಕೆ ಸುರು ಆತ್. ಅವ್ವ ಎಲ್ಲಾರ್ ಸತ್ತೋದ್ರೆ ಅಪ್ಪ ಇನ್ನೊಂದು ಮದ್ವೆ ಆವೊ. ಅಪ್ಪನ ಎರಡ್ನೆ ಹೆಣ್ಣ್ ನನ್ನ ಮತ್ತು ತಂಗೆನ ಸರಿ ನೋಡ್ಕೊಂಬುದೋ ಎಂತೆಲ್ಲಾ ಕೆಟ್ಟ ಯೋಚನೆ ಬಾತಿತ್ತ್. ಅದ್ಕೆ ಸರಿಯಾಗಿ ನಾ ಓದಿದ "ಅದ್ದಿಟ್ಟು" ಕತೆ ಪುಸ್ತಕದ "ದೊಡ್ಡಣ್ಣ" ಕತೆ ನೆಂಪುಗೆ ಬಂದ್ ನಾ ಇನ್ನೂ ಹೆದರಿ ಮುದ್ದೆ ಆದೆ.

ಬೊಳ್ಪಾದ ಮೇಲೂ ಅದೇ ಸ್ಥಿತಿ. ಅದೇ ಕೆಲ್ಸ – ಸೊಪ್ಪು ಹಾರ್ಸುದು. ಮಧ್ಯಾಹ್ನದವರೇಗೆ ಮಾರ್ಗದ ಕರೇಲಿ ಬಸ್‌ನೇ ಕಾದುಕಂಡ್ ಇದ್ದೆ. ಎಷ್ಟೋ ಹೊತ್ತಾದ ಮೇಲೆ ಬಸ್ ಬಾತ್. ಆದರೆ ಅದರ್ಲಿ ಅವ್ವ ಉಟ್ಟೋ ಇಲ್ಲೆನೋ ಅಂತ ಸಂಶಯ ನಂಗೆ. ಅವ್ವನ ಒಮ್ಮೆ ನೋಡೊಕು, ಮುಟ್ಟೋಕು, ದೇವಾ ನೀ ದಯಮಾಡ್‌ಂತ ಮನಸ್ಲಿ ಹೇಳಿದ್ ನಂಗೊತ್ತಿಲ್ಲದೆ ನಂಗೆ ಕೇಳ್‌ತಿತ್ತ್. ಓ ದೇವ್ರೇ! ದೊಡ್ಡ ಕಟ್ಟ್‌ನ ಹಿಡ್ಕಂಡ್ ಅವ್ವ ಇಳೀದು ಕಂಡತ್. ಅವ್ವಾ ಬಂದನೋಂತ ಹೇಳಿಕಂಡ್, ಕಣ್ಣೀರ್ನ ಒರ್ಸದೆ ಓಡಿ ಅವ್ವನ ಹಿಡ್ದೆ. ಬಸ್‌ಲಿ ಇದ್ದೊವೆಲ್ಲಾ ನಮ್ಮ ನೋಡುವೆಂತ ಗ್ಯಾನವೂ ಇತ್ಲೆ.

..... ದಿನಗ ಕಳ್ದೊ. ಆದರೂ ಒಂದು ಥರಾದ ಚಿಂತೆ ನಂಗೆ ಇತ್ತ್, ಮನೆಲೂ ಇತ್ತ್. ಕ್ರಮೇಣ ಹಳ್ತಾದಾಂಗೆ ಮರ್ತ್ ಹೋಕೆ ಆತ್. ಅದರ ಬದಲಿಗೆ ಹೊಸ ಹೊಸ ದುಃಖ ಸಂಕಟಗ ಹುಟ್ಟಿಕಂಡೊ, ಹಾಂಗೇ ಕಾಣೆಯಾಗ್ತಿದ್ದೊ. ನಮ್ಮ ಅವ್ವನೂ ಅಷ್ಟೇ. ಒಂದೊಂದು ಕಷ್ಟ ಸಂಕಟಗಳಲ್ಲಿ ದಾಟ್‌ತ್ತಾ ದಾಟ್‌ತ್ತಾ ಕರ್‌ಗಿ ಸೊರ್‌ಗಿ ತನ್ನ ಎಂಬತ್ತಾರನೆ ಪ್ರಾಯಲಿ ಹೊರ್ಟ್ ಹೋತ್. ಆದರೆ ನಮ್ಮೆಲ್ಲರ ನೆಂಪುಲಿ ಇನ್ನೂ ಉಟ್ಟು.

ಅವ್ವನ ಮಂಜ

* * * * *

# ಇಂದ್ ದೆವ್ವಕ್ಕೆ ಹರ್ಕೆಗಡ ಉಗ್ಗಪ್ಪ... ನೀವ್ಗೆ ಗೊತ್ತ್ಲೆನಾ?.......

– ಭವಾನಿಶಂಕರ ಅಡ್ತಲೆ

ಅಂದ್ ಐತಾರ ಕಾರ್ತಿಂಗಳ ಶುರುನ ಮಳೆ ಜಿರಿಗುಟ್ಟಿಕಂಡೇ ಇದ್ದದಕ್ಕೆ ಅಣ್ಣಿ ಅಜ್ಜ ಮಧ್ಯಾಹ್ನ ಹನ್ನಿನಕ್ಕಿ ಗುದ್ದಿ ಹಾಕಿದ ಪೊಜ್ಜಿ ಒಂದು ಬಾಯಿ ಉಂಡು ಹಾಂಗೇ ಮನೆ ಚಿಂಟೇಲಿ ಒರ್ಗಿದ್ದೆ. ತಲೆ ಅಡಿಗೆ ಶಿಲುವೆ ಮಣೆನ ಇಸಿ, ಒಂದು ಕಂಬಳಿ ತುಂಡುನ ಮೈಮೇಲೆ ಹಾಕಿದರ್‌ಂದ ಅವಂಗೆ ನಿದ್ದೆ ಬಂದದೇ ಗೊತ್ತಾತ್ಲೆ. ಮಕ್ಕಳ ಬೊಬ್ಬೆಗೆ ರಪ್ಪ ಎಚ್ಚರ ಆಗಿ ನೋಡಿರೆ ಕತ್ತಲಾದೋ ಅಲ್ಲ ಮಳೆ ಕತ್ಲೆನೋ ಗೊತ್ತಾಕ್ಕಿಲೆ. ಅಜ್ಜ ಮಲ್ಗಿದಲ್ಲಿಂದಲೇ ಮೆಲ್ಲ ಕೈ ಕುತ್ತಿ ಎದ್ದೊ. ಪಿಳ್ಳಿಕ ಇಬ್ಬೊರು ಬಾರಿ ಅತ್ತಿಂದಿತ್ತ ಇತ್ತಂದತ್ತ ಓಡಾಡುವೆ. ಒಟ್ಟಿಗೆ ನನ್ನ ಮಂಜ ಯಜಮಾನನೂ, ಏನ್ ಕಾಡ್‌ಲಿ ನಾಯಿನ ಹುಡ್ಕಿದಾಂಗೆ ಓಡಾಡ್ವೆ ಅರೆ ಎಂತ ಇಂದ್....

ಅಜ್ಜ ಒರ್ಲ್ ಕಲ್ಲಿನ ಹಕ್ಕಲೆ ಎಳ್ದೆ. ಎರಡು ಹೋಳು ಅಡ್ಕೆ ಹಾಕಿ ಮುಟ್ಟಿಲಿ ಗುದ್ದಿಕಂಡ್ ....ಮಕ್ಕಳೇ ಓ ಮಕ್ಕಳೇ... ಓ.... ಓ..... ಮಕ್ಕ ಇಬ್ಬರೂ ಓಂಕಡ್ ಓಡಿ ಬಂದೊ. ಎಂತ ಉಗ್ಗಪ್ಪ ಕರ್ದದ್... (ಎಷ್ಟ್ ಬೊಯ್ದರೂ, ಮಕ್ಕಳಿಗೆ ಅಜ್ಜನೊಟ್ಟಿಗೆ ಬಾರಿ ಪ್ರೀತಿ.) ಎಂತ ಇಲ್ಲೆ ಏನೋ ಬಾರಿ ಓಡಾಡ್ದು ಕಂಡದೆ ಹಾಂಗೆ ಕರ್ದದ್. ಓ ಅದಾ ಇಂದ್ ದೆವ್ವಕ್ಕೆ ಹರ್ಕೆ ಗಡ ಉಗ್ಗಪ್ಪ... ನೀವ್ಗೆ ಗೊತ್ತ್ಲೆನಾ?.... ಓ ನಂಗೆ ಮರ್ತ್ ಹೋಗುಟು. ಬೊಳ್ಪಿಗೆ ಎದ್ದಾಂಗೆ ಇಂವ ಒಮ್ಮೆ ಹೇಳಿಕಂತ್. ಇಂದ್ ಕಲ್ಲುರ್ಟಿಗೆ ಹರ್ಕೆ ಮಾಡಿರೆ ಹೇಂಗೇಂತ. ಮಕ್ಕಳಿಗೂ ಇಂದ್ ರಜೇಂತ. ಹಾಂ ನೆಂಪಾತ್ ಮಕ್ಕಳೆ ಅದರ್ಲಿ ನೀವ್ಗೆ ಎಂತ ಕೆಲ್ಸ?

ಅಜ್ಜ ಕೇಳ್ದೊ? ಎಂತ ಕೆಲ್ಸ ಗೊತ್ತಿಲೆ ಉಗ್ಗಪ್ಪ ನಮ್ಮ ಅಪ್ಪ ನಿಲ್ಲಿಕೆ ಕುದ್ರಿಕೆ ಬುಡ್ದುಲೆ. ಅದ್ ತಂಬ ಇದ್ ತಂಬಾಂತ. ಇಂದ್ ಅಡ್ಗೆ ಎಲ್ಲಾ ಅಪ್ಪನೇ ಗಡ! ಅಮ್ಮ ಅಡ್ಗೆ ಮಾಡಿರೆ ಸುದ್ದಿನೇ ಇಲ್ಲೆ. ಎಲ್ಯಾದ್ರೂ ಯಾಗೋಳು ಅಪ್ಪ ಅಡ್ಗೆ ಮಾಡ್ದು ಆದರೆ ನಾವು ಓದಿದಾಂಗೆ! ಕತ್ತಿ ತಂಬ ಕಾಯಿ ಚೊಲ್ಲು, ಬಾಳ್ಲೆ ಕೊಯ್ಯೆನಿ, ಮಣೆ ತಂಬ, ತೆರಿ ಕುದೆಂಟಿ ಎಲ್ಲಿಟ್ಟುನೇ? ಓ ರಾಮಾ ಅಪ್ಪಂಗೆ ಕುದ್ದಲ್ಲಿಗೆ ಆಕು.... ಅದ್ ಯಾಕೆ ಉಗ್ಗಪ್ಪ, ಅಮ್ಮ ಅಡ್ಗೆ ಮಾಡಿಕೆ ಆಗದಾ? ಸಣ್ಣ ಪಿಳ್ಳಿ ಕೇಳ್ತ್! ಇಲ್ಲೆ ಮಂಜ ದೆವ್ವಕ್ಕೆ ಯಾಗೋಳು ಗಂಡ್‌ಗಳೇ ಅಡ್ಗೆ ಮಾಡ್ದು ಪದ್ಧತಿ. ದೆವ್ವಕ್ಕೆ ರೊಟ್ಟಿ ಮಾಡ್ದರ್‌ಂದ, ಕೋಳಿ ಕೊಲ್ಲುದು, ಗೈಪು ಮಾಡ್ದು, ಗಂಜಿ ಬೆಯ್ಸುದು ಎಲ್ಲನೂ ಗಂಡ್‌ಗಳೇ ಮಾಡೋಕುಂತ ಪದ್ಧತಿ. ಮುಂದೆ ನಮ್ಮ ಅಪ್ಪ ಮಾಡ್ತಿದ್ದೊ. ಆಮೇಲೆ ನಾ ಮಾಡಿಕೆ ಶುರು ಮಾಡ್ದೆ. ಈಗ ನಿಮ್ಮ ಅಪ್ಪ ಮಾಡ್ತಾ ಉಟ್ಟು. ಇನ್ನ್ ಮುಂದೆ ನೀವು ಅದರ ಪಾಲಿಸೊಕು. ಹೆಂಗೆಲ್ಲಾ ಮಾಡ್ದೂಂತ ಲಾಯಿಕ್ ನೋಡಿಕಣಿ. ನೀವು ಗಂಡ್ ಮಕ್ಕ ಅಲಾ.....?

ಅಲ್ಲ ಉಗ್ಗಪ್ಪ... ಪ್ರತೀ ವರ್ಷ ಮಳೆಗಾಲ ಶುರು ಆಕನನೆ ದೆವ್ವಕ್ಕೆ ಕೊಡ್ದು ಯಾಕೆ? ಕಳ್ದ ವರ್ಷದನೂ ಮಳೆಗಾಲಲಿ ಕೊಟ್ಟ ನೆಂಪು ! ದೊಡ್ಡ ಪಿಳ್ಳಿ ಕೇಳ್ತ್.

ಮಳೆಗಾಲಂತೆಳಿರೆ ಮುಂದೆನ ಕಾಲಲಿ ಬೇಸಾಯ ನಾಟಿ ಎಲ್ಲಾ ಮುಗ್ಸಿ ಗದ್ದೆಲಿ ಕೈ ಹೊಡೆ ಬಾಕ್ಯಾಕನ ಮಾರಿ ಬೀರಿಗಳ ಎಲ್ಲ ಬಾರದಂಗೆ ದೆವ್ವ ದೇವುರ್‌ಗಳ ನೆನ್ಸಿಕಾಂಬೋದು ಪದ್ದತಿ. 'ಹೊಡೆ' ತೇಳಿರೆ ಎಂತ ಉಗ್ಗಪ್ಪ? ಸಣ್ಣ ಪಿಳ್ಳಿನ ಪ್ರಶ್ನೆ. ಹೊಡೆ ತೇಳಿರೆ ಕೈ ಬೆಳ್ದ್ ಕದ್‌ರ್ ಹೊರ್ದುವ ಸಮಯ. ಆಗ ಗದ್ದೆಲಿ ನೆಟ್ಟ ನೇಜಿ ಎಲ್ಲಾ ಕಪ್ಪು ಕಪ್ಪು ಆಗಿ ನೋಡಿಕೆ ಬಾರಿ ಪೊರ್ಲು. ದೆವ್ವ ದೇವುಗಳ್ಲಿ ನಾವು ಬೇಸಾಯ ಮಾಡೋವು ಕಲ್ಲುರ್ಟಿ, ಗುಳಿಗಂಗೆ ಹೇಳ್ದ ಹರ್ಕೆ ಕೊಟ್ಟವೆ. ಕಲ್ಲುರ್ಟಿಂತೇಳ್ರೆ ಮನೆ ದೆವ್ವ, ಅದ್ಕೆ ಮನೆ ಒಳಗೆ ಇಕ್ಕಿ ಕೈ ಮುಗ್ಯೋದು. ಇದ್ ಮಕ್ಕ ಮರಿಗಳಿಗೆ ಮನೇಲಿದ್ದವ್ಕೆ ಕಾಯಿಲೆ ಕಸಾಲೆಗ ಬಾರದಂಗೆ ನೋಡಿಕಾಕುಂತ ನಂಬಿಕೆ. ಇನ್ನ್ ಗುಳಿಗಾಂತೇಳ್ರೆ ಬಯ್ಲ್ಲಲಿ ತಿರ್ಗ್ಗಾಡುವ ದೆವ್ವ ನಮ್ಮ ಬೆಳೆ ಪೈರಿಗೆ ಏನೂ ಆಗದಾಂಗೆ ರಕ್ಷಣೆ ಮಾಡಿಕೊಡುವ ಗುಳಿಗ ಬಂಟಂತ ನಾವು ಕರ್ದವೆ. ಆಗ ಗುಳಿಗಂಗೆ ಯಾಗ ಕೊಡ್ದು ಉಗ್ಗಪ್ಪ? ಸಣ್ಣ ಪಿಳ್ಳಿ ಕೇಳ್ತ್ ಗುಳಿಗಂಗೆ ಮನೇಲಿ ಕೊಡುವ ಕ್ರಮ ಇಲ್ಲೆ ಮಂಜ. ಅದ್ಕೆ ಗುಡ್ಡೆಲಿ ಕೊಡ್ದು. ಅದ್ ಒಬ್ಬೊಬ್ಬ ಮನೇವು ಕೊಡ್ದು ಕ್ರಮ ಇಲ್ಲೆ ಇಡೀ ಕುಟುಂಬದೊವು ಒಟ್ಟು ಸೇರಿ ಗುಡ್ಡೇಲಿ ಅಡ್ಗೆ ಮಾಡಿ ಕೊಡ್ದು ಪದ್ಧತಿ. ಅದ್ಕೆ ಹೆಣ್ಮಕ್ಕ ಬಾಕೆ ಇಲ್ಲೆ. ಗುಡ್ಡೆಲಿ ಕೈ ಮುಗ್ದ ಮೇಲೆ ಅಲ್ಲೇ ಉಂಡ್ ಬರೋಕು. ಈಗ ಅದರೆಲ್ಲಾ ಯಾರ್ ಆಚರಣೆ ಮಾಡುವೆ? ಮುಂದೆಲ್ಲಾ ನಮ್ಮ ಅಪ್ಪ ಹೇಳ್ತಾ ಇದ್ದೊ. ನಮ್ಮ ತೋಟಲಿದ್ದ ಚಾಳೆಂದ ಯಾರ್ಯಾಯ್ ಕಳ್ಳರ್ ಕದ್ದ್ ಕಾಯಿ ಬೆಂಡ ರಾತ್ರಿ ತೆಗ್ದರೆ, ಗುಳಿಗ ಲೆಕ್ಕ ಮಾಡಿಕೊಂಬೊದು ಗಡ. ಒಂದೋ ಎರಡೊಂತೇಳಿ. ಇನ್ನ್ ಒಂದು ಮಾತ್ರ ತೆಗಿ ಹೆಚ್ಚಿಗೆ ತೆಗ್ಯಬಡಾಂತ ಹೇಳ್ದಿಗಡ. ಮೂರ್ನೆದಕ್ಕೆ ಮೂರುಂತ ಹೇಳಿ ಅದರ ಮಾತ್

ಮೀರಿ ನಾಲ್ಕ್ ತೆಗ್ತಾ? ಅವನ ಚಾಳೆಂದಲೇ ಗುಳಿಗ ಎಳ್ದು ಹಾಕುದು ಗಡ. ಅಷ್ಟ್ ಕಾರ್ಣಿಕ ಇತ್ತ್ ದೆವ್ವಕ್ಕೆ. ಈಗ ಕಾರ್ಣಿಕೆ ಇಲ್ಲೆನಾ ಉಗ್ಗಪ್ಪಾ? ದೊಡ್ಡ ಪಿಳ್ಳಿ ಕೇಳ್ತ್. ಕಾರ್ಣಿಕೆ ಈಗೋಳು ಉಟ್ಟು, ಜನ ನಂಬೊಕಲ್ಲ? ನಂಬಿಕೆ ಇದ್ದರೆ ಈಗೊಳೂ ಕಾರ್ಣಿಕೆ ಉಟ್ಟು...

ಎಲ್ಲಿ ಹೋದೆರಿನೇ ಓ ಮಕ್ಕಳೆ ಒಂದು ಚೆಂಬು ನೀರ್ ತನ್ನಿ. ಒಳಗಿಂದ ಅಪ್ಪನ ಸ್ವರ ಕೇಳ್ತ್ ಉಗ್ಗಪ್ಪ, ಉಗ್ಗಪ್ಪ ಅಪ್ಪ ಕರ್ದವೆ. ನಾವು ಹೋದವೆ ಮಕ್ಕ ಕುದ್ದಲ್ಲಿಂದ ಎದ್ದೊ. ಹಾಂ ಹೋಗಿ ಹೋಗಿ ಅಂವ ಇಂದ್ ಪೂಜಾರಿ ಅಲ್ಲಾ ಅಂವಂಗೆ ಎಲ್ಲ ಕೊಡಿ ಮತ್ತೆ ನೀವು ಸಹಾ ಕಲ್ತುಕಾಂಕು. ಪೂಜಾರಿಂತೇಳಿರೆ ಎಂತ ಉಗ್ಗಪ್ಪ ಅವ್ರು. ಗೌಡ್ರು ಅಲ್ಲನಾ? ಓ ತಲೆ ಹೋಕಾ... ಪೂಜಾರಿಂತೇಳಿರೆ ಜಾತಿ ಅಲ್ಲ ಮಂಜ ಶುದ್ದ ಮುದ್ರಿಕೆಲಿ ಇರೊಕು. ಹಾಂಗನೆ ಅಪ್ಪ ಆಗೊಳೆ ಮೀದ್ ಬಿಳಿ ಪಂಚೆನ ಉಟ್ಟುಕಂಡೊಳೊ. ಓ ಮಕ್ಕಳೆ ಹಿಂದಕ್ಕೆ ಅಪ್ಪನ ಅರ್ಭಟೆ, ಹೋಗಿ ಹೋಗಿನೆ ಕೋಳಿ ಕೊಲ್ಲಿಕೆ ಆಗಿರೊಕು. ಅಜ್ಜ ಬೈದು ಮಕ್ಕಳ ಕಳ್ಸಿದೊ.

ಅಲ್ಲಿ ಹೋಕನ ಅಪ್ಪನ ಕೈಲಿ ಒಂದು ಹೆಂಟೆ ಕೋಳಿ ಇತ್ತ್. ಚೊಂಬುಲಿ ನೀರ್ ತನ್ನಿಂತ ಹೇಳ್ದಲ್ಲಾ? ಅಪ್ಪ ಹೆದ್ರಿಸಿದೊ. ದೊಡ್ಡಂವ ಒಂದು ಚೆಂಬುಲಿ ನೀರ್ ತಾತ್. ಇದರ ಕಾಲ್‌ಗೆ ನೀರ್ ಹಾಕ್‌ಂತ ಅಪ್ಪ ಹೇಳ್ದೊ. ಕೋಳಿನ ಕಾಲ್ ಕೊಕ್ಕು ಎಲ್ಲಾ ಲಾಯಿಕೆ ತೊಳ್ದೆ. ಅದ್ಯಾಕೆ ಅಪ್ಪಾಂತ ಸಣ್ಣ ಮಂಜ ಕೇಳ್ರೆ ಕೋಳಿನ ಕಾಲ್‌ಲಿ, ಕೊಕ್ಕ್‌ಲಿ ಎಲ್ಲಾ ಹೇಸಿಗೆ ಕೇರಿ, ತಿಂದ್‌ದೆಲ್ಲಾ ದೆವ್ವಕ್ಕೆ ಕೊಲ್ಲಿಕಾಕನ ಶುದ್ದಲಿ ಬೇಕುಂತ ತೊಳ್ದದು. ಅಪ್ಪ ಪೂರ್ವ- ಪಶ್ಚಿಮ ನಿತ್ತ್ ಕೋಳಿನ ಹಿಡ್ಕಂಡ್ ಏನೋ ಮಂತ್ರಿಸಿದವರಂಗೆ ಮಾಡಿ ಕಣ್ಣ್ ಮುಚ್ಚಿ ಕೋಳಿನ ಕುತ್ತಿಗೆನ ಎರಡ್ ಸರ್ತಿ ಎಳ್ದ್ ಜಾಲಿಗೆ ಹಾಕಿದೊ. ಕೋಳಿ ಬಿದ್ದ್ ಜಾಲ್‌ಲಿ ಪಟಪಟಾಂತ ಹೊಣ್ಕಿಕೆ ಶುರು ಮಾಡ್ತ್. ಅದರೊಟ್ಟಿಗೆ ಕಾಲ್‌ನ ಕುತ್ತ ಮಾಡಿ ಸೈಕಲ್ ಮೆಟ್ಟಿದಾಂಗೆ ಮಾಡಿಕೆ ಶುರು ಮಾಡ್ತ್. ಅಪ್ಪ ಹೇಳಿಕಂದೊ. ಅವತಾರ ಇಲ್ಲಿ ಬೇಡ ಕೋಳಿನ ಸರಿ ಬಿಳ್ಸುಂತ. ಮಕ್ಕ ಮೋರೆ ಮೋರೆ ನೋಡಿಕಾಂದೊ. ದೊಡ್ಡವ ಕೇಳ್ತ್ ಅದ್ಯಾಕೆ ಅಪ್ಪ ಕೋಳಿ ಹಾಂಗೆ ಮಾಡ್ದು? ಅದ ಕೋಲ ಕೊಡೋಕುಂತ ತೋರ್ಸುದು ಗಡ. ನಾವುಗೆ ಅಷ್ಟು ಸುಲಭಲಿ ಕೋಲಕೊಡಿಕೆ ಆದೆನಾ ಹಾಂಗೆ ಹೇಳಿಕಂದ್ ಅವತಾರ ಬೇಡಾಂತ.

ದೆವ್ವಕ್ಕೆ ಒಂದು ಮಾತ್ ಉಟ್ಟು. "ಹೂವು, ಹೂವುಗೆ ಕುಸುಮ, ಕುಸುಮಕ್ಕೆ ಪರಿಮಳ" ತೇಳ್ದಾಂಗೆ ನಾವು ಬಂಗಲಿ ಹರಿಕೆ ಕೊಡ್ತಾ ಒಳೊ. ಹೂವುನೇ ಕೊಡೊಕು. ಅದು ಆದುಲೆಂತೇಳಿರೆ ಕುಸುಮ, ಅದೂ ಆದುಲೆಂತೇಳಿರೆ ಪರಿಮಳಂತ ಹೇಳ್ದೆ. ಹಾಂಗೆ ನಾವು ಈಗ ಹರಿಕೆ ಕೊಡ್ತಾ ಒಳೊ. ಇನ್ನು ಕೋಲ ಯಾಗ ದೇವ್ರು ಒದಗಿಸಿಕೊಟ್ಟವೆ ನೋಡೊಕು. ಅದೆಲ್ಲಾ ಅವತಾರ ಅಷ್ಟೆಂತ. ಅಪ್ಪ ಹೇಳಿ ಕೋಳಿ ಕೈಕಾಲ್ ಆಡ್ದರ ನಿಲ್ಸಿ ಸರಿ ಮೂಡ ಪಡ್ಡ ಬಿದ್ದಾಂಗೆ ನೀರ್ ಅದರ ಮೇಲೆ ಹಾಕಿದೊ.

ಮಕ್ಕಳೆ ಅದರ ಲಾಯಿಕ್ ಚೆಂಡಿ ಮಾಡಿ ತೊಪ್ಪುಳು ತೆಗೆನಿ. ದೊಡ್ಡ ತೊಪ್ಪುಳು

ಹೋದ ಮೇಲೆ ಹನಿ ಕಾಯಿಸಿ ಕೊಟ್ಟನೆ. ನಾ ರೊಟ್ಟಿ ಕಲ್ಸಿಕೆ ನೀರ್ ಒಲೆ ಮೇಲೆ ಇಸೊಕು. ಆಗಳೇ ಅಕ್ಕಿ ಎಲ್ಲ ಬೀಸಿ ರೆಡಿ ಮಾಡಿ ಇಸ್ಯೊಳೆಂತ ಹೇಳಿ ಅಪ್ಪ ಹೊರ್ಟತ್.

ಸತ್ತ ಕೋಳಿನ ದೊಡ್ಡಂವ ಹೇರಿಕ್ಕಂಡ್ ಚೊಲ್ಲಿಕೆ ಮಕ್ಕ ಹೊರ್ಟೊ. ಸಣ್ಣಂವ ಕೇಳ್ತ್. ಉಗ್ಗಪ್ಪ ಹೇಳ್ದಲ್ಲಾ ಅಡಿಗೆ ಎಲ್ಲಾ ಅಪ್ಪನೇ ಮಾಡೋಕುಂತಾ ಮತ್ತೆ ನಾವು ಕೋಳಿ ಚೊಲ್ಲಿರೆ ಆದೆನಾ? ನೀ ಬಾಯಿ ಮುಚ್ಚಿ ಕುದ್ರು. ಉಗ್ಗಪ್ಪ ಹೇಳ್ದೊಂತ ನಾವು ಅಪ್ಪನೊಟ್ಟಿಗೆ ಹೇಳಿರೆ ನಮ್ಮ ತಲೆ ಕೊಟ್ಟ ಬಾದು. ಅಡಿಗೆ ಮಾತ್ರ ಹೇಳ್ದ ನಾವು ಕೋಳಿ ಚೊಲ್ಲಿಕೆ ಆಗದ್ಂತಾ ಉಗ್ಗಪ್ಪ ಹೇಳ್ತ್‌ಲೆಲ್ಲಾ...?

ಹಿಂಬೊತ್ತು 4 ಗಂಟೆಗೆ ಅಪ್ಪ ರೊಟ್ಟಿ ಮಾಡಿಕೆ ಶುರು ಮಾಡ್ಡೊ. ಅಮ್ಮ ಇಂದ್ ಬಾರಿ ಆರಾಮಲಿ ಉಟ್ಟು. ಅಪ್ಪ ಮಾತ್ರ ಅಮ್ಮವರ ಗಂಡ ಆಗೊಳೊ. ಒಲೆ ಮೇಲೆ ಓಡು ಬಿಸಿ ಮಾಡಿಕೆ ಇಸ್ಯೊಳೊ. ಒಂದು ದೊಡ್ಡ ತಡ್ಪೆಲಿ ಅಕ್ಕಿ ಹುಡಿನ ಹಾಕಿ ಅದ್ಕೆ ಬಿಸಿ ಬಿಸಿ ನೀರ್‌ನ ಚೆಪ್ಪಿ ಸೆಡೆಲಿ ಹಾಕ್ಕೊಂಡ್, ಅಪ್ಪ ಕಲ್ಸ್‌ತಾ ಒಳೊ. ಕೈ ಹೊತ್ತಿಕಾಕಕನ ಉಪ್ಪಂತ ಉರ್‍ಗಿಕಂಡ್ ಬಾರಿ ಬಂಗಲಿ ಕಲ್ಸುವೆ. ಹೊರ್ದ ಅಕ್ಕಿನ ಹುಡಿನನೂ ಅದ್ಕೆ ಸೇರ್‍ಸಿಕಂಡ್ ಉಪ್ಪುನ ಹೊಡಿ ಮಾಡಿ ಇಸಿಕಂಡ್ ಹನಿ ಹನಿ ಸೇರ್‍ಸಿ ಕಲ್ಸಿದೊ. ಅಂತೂ ದೊಡ್ಡ ಕಡ್ಕಲ್ ಗುಂಡುನಾಂಗೆ ಬಂದ ರೆಡಿ ಆತ್. ನಾವು ಮಕ್ಕ ದೂರಲಿ ನೋಡ್ತಾ ಒಳೊ. ಅಪ್ಪನ ಹಕ್ಕಲೆ ಹೋಕೆ ಧೈರ್ಯ ಇಲ್ಲೆ. ಅಪ್ಪಂಗೆ ಬೆವ್ರುನೂ ಮೂಂಕುಂದ ನೀರುನೂ ಅರಿತಾ ಉಟ್ಟು. ಈ ಟೈಮುಲಿ ಮಾತಾಡ್ರೆ ಪೆಟ್ಟ್ ಬೀಳ್ದು ನಿಘಂಟ್. ಹಾಂಗೂ ಹೀಂಗೂ ರೊಟ್ಟಿ ಆಗ್ತಾ ಉಟ್ಟು. ಇನ್ನೊಂದು ಒಲೆಲಿ ಕೋಳಿಗೈಪು. ಬೆಯತಾ ಉಟ್ಟು. ಅದ್ಕೆ ಉಪ್ಪು ಖಾರ ಎಲ್ಲಾ ಅಂದಾಜಿಗೆ ಹಾಕುದು. ಸರಿ ಆಗುಟಾಂತ ನೋಡಿಕೆ ಇಲ್ಲೆ. ದೆವ್ವಕ್ಕೆ ಮಡೆ ಆಗದೂಂತ. ಅಪ್ಪ ಅಂದಾಜಿಗೆ ಹಾಕಿರೂ ಸರಿ ಆದೆ. ಹಿಂದೆ ಉಗ್ಗಪ್ಪ ಅವ್ವಂಗೆ ಹುಷಾರಿಲ್ಲದಾಕನ ಅಪ್ಪನೆ ಅಡ್ಗೆ, ಚಾಯ, ತಿಂಬಕೆ ಎಲ್ಲಾ ಮಾಡಿ ಅಭ್ಯಾಸ ಉಟ್ಟು. ಈಗ ಅಮ್ಮ ಬಂದ ಮೇಲೆ ಅಪ್ಪ ಕೋಣೆಗೆ ಹುಗ್ಗುದು ಕಡ್ಮೆ.

ಹೋಗಿನೆ ಮಕ್ಕಳೆ ಒಂದು ಹತ್ತು ತುಂಡು ಕೊಡಿ ಬಾಳ್ಲೆ ಮತ್ತೆ ಹಂಞ ಕಡೆ ತುಂಡು ಸಹ ಕೊಯ್ಕೊಣಿ ಬನ್ನಿ. ಗಂಧ ಅರೆಕೆ ಕಿಳ್ಗೆ ಎಲ್ಲಾ ಬೇಕಾದೆಂತ ಅಪ್ಪಂದ್ ಆರ್ಡರ್ ಆತ್. ಒಟ್ಟು ಅಪ್ಪ ಕೆಲ್ಸ ಮಾಡಿಕಾಕನ ಯಾರು ಕುದ್ರುದ್ ಕಾಂಬಕೆ ಬೊತ್ತ್. ಅದ್ಕೆ ಅಮ್ಮ ಅಪ್ಪಂಗೆ ಕಾಣದಂಗೆ ಕುದ್ದುಟು.. ಬಾಳ್ಲೆ ಕೊಯ್ಯಕೆ ಚೂರಿ ಹಿಡ್ಕಂಡ್ ತೋಟಕ್ಕೆ ಹೋದೊ. ಹಾಂಗೆ ಬಾಳ್ಲೆ ತಾಕ್ಯಾಕನ ಅಪ್ಪನ ಅಡಿಗೆ ಎಲ್ಲಾ ರೆಡಿ ಆಗಿರೊಕು. ಇತ್ತ ಚೂರಿ ತನ್ನಿ ಹಾಂಗೇ ಒಳಗಿಂದ ನಾಲ್ಕೆ ಮಡ್ಲ್ ತಕಂಡ್ ಬನ್ನೀಂತ ಅಪ್ಪ ಹೇಳ್ಡೊ. ಒಣಗಿಲ್ಲ್ ಮಡ್ಲ್‌ನ ಅಪ್ಪ ಚೂರಿಲಿ ಕೀಸಿ, ಮೊಡ್ಯೊಳ ತಂದ್ ಕೊಟ್ಟ ದೆಳಿಯನ ಹರ್ದ್ ಅದ್ಕೆ ಸುತ್ತಿಕೆ ಶುರು ಮಾಡ್ಡೊ. ಅದ್ ಕೋಲ್‌ತ್ರಿ ಗಡ್. ಅದರ ಎಣ್ಣೆಲಿ ಅದ್ದಿ ಮತ್ತೆ ಕುತ್ತಿಕೆ ಉಟ್ಟು ಗಡ. ಉಗ್ಗಪ್ಪ ಹೇಳ್ತಿದ್ದೊ. ದೊಡ್ಡಂವ ಸಣ್ಣಂವಂಗೆ ಹೇಳ್ತ್ ಆಗ ಸಣ್ಣಂವ ಕೇಳ್ತ್. ಮೊಡ್ಯೊಳ ದೆಳಿಯಾನ

ಕೊಡಿಕಾಕನ ಹರ್ದ್ ಕೊಡ್ದು ಯಾಕೆ? ನಿಂಗೆ ಗೊತ್ತುಟ್ಟಾಂತ? ಆಗ ದೊಡ್ಡಂವ ಹೇಳ್ತ್ ಮುಂದೆ ಇಡೀ ದೆಳಿಯ ಕೊಡ್ತಿದ್ದೊಗಡ. ಹಾಂಗೆ ಕೊಟ್ಟದರ ಯಾರೋ ಒಬ್ಬ ಹೈದ ಗೊತ್ತಿಲ್ಲದೆ ಕೋಮಣ ಕಟ್ಟಿಟುಗಡ. ಹಾಂಗೆ ಹೇಳಿಕಾಕಕನ ಸಣ್ಣಂವ ಪುಸ್ಸಂತ ನೆಗಾಡ್ತ್. ಅಂವ ನೆಗಾಡಿಕಾಕನ ದೊಡ್ಡವನೂ ನೆಗಾಡಿಕೆ ಶುರು ಮಾಡ್ತ್. ಮುಂದೆನೇ ನೂರು ಡಿಗ್ರಿಲಿದ್ದ ಅಪ್ಪ ಇವು ನಂಗೆ ತಮಾಷೆ ಮಾಡ್ದೊಂತ ನೆನ್ಸಿ ನಡ್ದರೆನಾ ಇಲ್ಲೆನಾ ಇಲ್ಲಿಂದ ನಾ ಬೊಚ್ಚಿಕಂಡ್ ಇರಿಕಾಕನ ನಿಮ್ಮದ್ ಕೋಂಗಿ.... ಹೋಗಿ ಇಲ್ಲಿಂದ ಮಕ್ಕ ಬಾಯಿ ಮುಚ್ಚಿಕಂಡ್ ಅಮ್ಮನಕ್ಕಲೆ ಓಡ್ದೋ. ಅಮ್ಮ.. ಅಮ್ಮ.. ಅಪ್ಪಂಗೆ ಈಗಲೇ ದೆವ್ವ ಬಾಕೆ ಶುರು ಆಗುಟು. ಕಣ್ಣ್ ಎಲ್ಲಾ ಹೊರ್ಪ್ ಹೋದಂಗೆ ಕಂಡದೆ. ಅಪ್ಪಂಗೆ ಇಂದ್ ಒಳ್ಳೆ ಅದ್‌ರ್‌ಟು. ಹಾಂಗೇ ದೆವ್ವ ಹಿಡ್ಯೊದು. ನೀವು ಹೋಬೆಡಿ ಅವರಕ್ಕಲೆ. ಸುಮ್ಮನೆ ಕುದ್ರಿ ಕರ್ದರೆ ಮಾತ್ರ ಹೋದರೆ ಸಾಕ್‌ಂತ ಅಮ್ಮ ಹೇಳ್ತ್. ಮಕ್ಕ ಸುಮ್ಮನೆ ಕುದ್ದವೆನಾ. ಉಗ್ಗಪ್ಪನಕ್ಕಲೆ ಹೋದೊ.

ಉಗ್ಗಪ್ಪ... ಉಗ್ಗಪ್ಪ.... ದೆವ್ವದ ಹರ್ಕೆ ಎಷ್ಟೊತ್ತಿಗೆ ಮಕ್ಕ ಕೇಳಿಕೆ ಶುರು ಮಾಡ್ದೊ ಹೆಂಗಿದ್ದರೂ ಕತ್ತಲೆ ಕತ್ತಲೆ ಆಕು. ಮಂಜ ಉಮ್ಮ ಅಂವ ಯಾರಿಗೆಲ್ಲ ಹೇಳಿಟು ಗೊತ್ತಿಲ್ಲೆ. ಕೆಳಗೆ ಮನೆ ಉಗ್ಗಪ್ಪನೋವ್ಕೆ, ಮೇಲೆ ಮನೆ ದೊಡ್ಡಪ್ಪನವ್ಕೆ, ಆದರೂ ಹೇಳೋಕು. ಇನ್ ಅಂವನ ಜೋಸ್ತಿಗ ಯಾರ್‍ಯಾರ್ ಬಾವೊ ಗೊತ್ಲೆ. ಅವು ಬಂದ ಮೇಲೆ ದೆವ್ವಕ್ಕೆ ಇಕ್ಕುದು. ಅದ್ಕೆ ಮುಂದೆ ಸುಮಾರು ಕೆಲ್ಸ ಉಟ್ಟು. ಅಡ್ಗೆ ಆದರೆ, ಇನ್ನ್ ಕಿಳ್ಳಿ ಆಕು. ದೀಪಗಳೆಲ್ಲ ತೊಳ್ಯೆಕು. ಮಣಿ ತೊಳ್ಯೆಕು. ಬಾಳೆ ಆಕು. ಬಾಳೆ ನಾವು ತಂದೊಳೊ ಉಗ್ಗಪ್ಪ ಮಕ್ಕ ಒಟ್ಟಿಗೆ ಹೇಳ್ದೊ. ಹಾಂ ತಂದಳೆರ್‍ಯಾ ಒಳ್ಳೆದಾತ್. ಇನ್ನ್ ಸೆಗಣಿ ಆಕು. ಮತ್ತೆ ಅಂವ ಪೂಜಾರಿ ಮೀಯೊಕು. ಇಷ್ಟೆಲ್ಲಾ ಆಕನ ಬರೊವು ಬಂದವೆ. ಮತ್ತೆ ಇಕ್ಕುದು. ಹಾಂ ಅಷ್ಟು ಹೊತ್ತು ಬೇಕಾ? ಮಕ್ಕಳಿಗೆ ತಡ್ಯಕೆ ಆದುಲೆ. ಕೋಳಿಗೈಪು ಪರಿಮಳ ಮೂಂಕಿಗೆ ಹೊಡೆತಾ ಉಟ್ಟು. ಮಕ್ಕಳ ನೋಡಿ ಉಗ್ಗಪ್ಪ... ಅಣ್ಣಾ ಅದ್ ನೀವ್ಗೆ ಮಾಡ್ದ್ ಅಲ್ಲ. ದೆವ್ವಕ್ಕೆ ಮಾಡ್ದ್. ನೀವು ಬಾಯಿಲಿ ನೀರ್ ಆರ್ಸುದು ಬೇಡ. ಮಕ್ಕಳಿಗೆ ಅಪ್ಪ ಹೆದ್ರಿಸಿದೊ. ಆಗ ದೊಡ್ಡ ಪಿಳ್ಳಿ ಹೇಳ್ತ್ ಪೂರಾ ದೆವ್ವಕ್ಕೆ ಕೊಡ್ದು ಆದರೆ ಯಾರೂ ಹರ್ಕೆನೇ ಮಾಡ್ತಿತ್ಲೆ. ಏನೋ ದೆವ್ವ ತಿನ್ನದರ್‌ಂದ ಇಷ್ಟ್ ಬಂಗ ಬಂದ್‌ಕಂಡ್ ಮಾಡ್ತಾ ಒಳೊ. ಓ ನಿಂಗೆ ಹಂಜ ಬೆಳ್ಚಿಲ್ ಬಾಕೆ ಶುರು ಆಗುಟು ಕಂಡದೆ. ಅಜ್ಜ ಅಸಮಾಧಾನಲಿ ಹೇಳಿಕಂಡೊ. ಪೂಜಾರಿ ಕೆಲ್ಸ ಎಲ್ಲ ಆತ್. ಆಚೆವು ಈಚೆವು ಎಲ್ಲಾ ಬಂದೊ. ಅಂತೂ ಮನೇಲಿ ಹತ್ತು ಹನ್ನೆರಡು ಜನ ಸೇರ್‍ದೊ. ಈಗ ಅಡಿಗೆ ಕೋಣೆಲಿ ಪೂಜಾರಿ ಎಲ್ಲಾ ದೆವ್ವಕೆ ಇಕ್ಕಿತ್. ಮತ್ತೆ ಅಪ್ಪನ ಕರ್‍ತ್. ಮಕ್ಕ ಓಡಿಕಂಡ್ ಹೋಗಿ ಉಗ್ಗಪ್ಪ ನೀವು ಬರಕಡ ಅಪ್ಪ ಕರ್ದವೆಂತ ಹೇಳ್ದೊ. ಉಗ್ಗಪ್ಪ ಮೆಲ್ಲ ಎದ್ದ್‌ಕಂಡ್ ಹೋದೊ. ನಾ ಎಂತಕೆ ನಿಂಗೆ ಗೊತ್ತಿಲೆನಾ ಇಷ್ಟು ವರ್ಷ ಮಾಡ್ಯಳಲಾ. ಆದರೂ ಇಕ್ಕಿದ್ ತಪ್ಪಕೆ ಆಗದಲ್ಲಾಂತ ಮಂಜನ ರಾಗ. ಒಟ್ಟು ಮೂರು ಎಡೆ ಹಾಕಿ ಒಂದೊಂದು ಎಡೆಗೆ ಎರಡೆರಡು ರೊಟ್ಟಿ. ಕೋಳಿಗೈಪು. ಒಂದು ಎಡೆಗೆ

ಬಟ್ಟೆಕಾಯಿ, ಇನ್ನೊಂದು ಎಡೆಗೆ ಕರಿಯಡ. ಮತ್ತೊಂದ್‌ಕಡೆ ಎಡೆನ ಹಂಜ ಮುಂದೆ ವೀಳ್ಯ ಇಸಿ ಅದ್ಕೆ ರೊಟ್ಟಿ ಹುಗ್ಗೆ ಮತ್ತೆ ಕೋಳಿಗೈಪು. ಇಕ್ಕಿ ಎಲ್ಲಾ ಆತ್.

ಎಡೆಗೆ ಒಂದೊಂದು ಪಂಚೊಳಿ ಎಲೆ ಅಡ್ಡ ಹೋಳು, ಎಡೆದ ಎದುರಿಗೆ ಮೂರು ಬಾಳ್ಲೆನ ಕಿಳ್ಳಿ ಮಾಡಿ ಒಂದಕ್ಕೆ ಬೆಲ್ಲದ ನೀರ್, ಇನ್ನೊಂದಕ್ಕೆ ನೀರ್ ಹೊಯ್ದು ಅದ್ಕೆ ಮಸಿ ತುಂಡು ಹಾಕಂದು. ಇನ್ನೊಂದರ್ಲಿ ಹಂಞ ಕೋಳಿ ರಸ, ಒಂದು ತುಂಡು ಹಾಕಿ ಇಸಿ ಆತ್. ದೆವ್ವಕ್ಕೆ ಕಳ್ಳ್‌ನೋ, ಸರಾಯಿನೋ ಗ್ಲಾಸ್‌ಲಿ ಹೊಯ್ದು ಇಸುದು. ಇಲ್ಲರೆ ಕಳ್ಳಿಲಿ ಇಸಿರೂ ಆದೆ. ಬಾಳ್ಲೆ ಎಲೆ ಕೊಡಿಗೆ ನೆಣೆ ಬತ್ತಿ ಇಸಿ, ಕೋಲ್‌ತ್ರಿನ ಬಾಳೆ ಹಣ್ಣ್ ಇದ್ದರೆ ತುಂಡು ಮಾಡಿ ಅದ್ಕೆ ಕುತ್ತುದು. ಇಲ್ಲರೆ ಬಾಳೆದಂಡ್‌ಗೆ ಕುತ್ತಿರೂ ಆದೆ. ಇಕ್ಕಿ ಆದ ಮೇಲೆ ಗಂಧ ಅರ್ದದರ ಎಲೆ ಕೊಡಿಗೆ ಸಿಡ್ಕಿ ಬಂದೊವೆಲ್ಲಾ ಹಾಕಂಬೊದು. ಇನ್ನ್ ಮನೇವು ಕುಟುಂಬದೊವು ಮತ್ತೆ ನೆಂಟ್ರ್‌ಗ ಯಾರಾರ್ ಇದ್ದರೆ ಅವ್ಕೆ ಎಲ್ಲಾ ಬೆಳ್ತಿಗೆ ಅಕ್ಕಿ ಕೈಗೆ ಕೊಟ್ಟ್ – ಹುರ ಅಪ್ಪ ಹೇಳಿಕಣಿಂತ ಮಂಜ ಹೇಳ್ರೆ ಅಪ್ಪ ನೀನೆ ಹೇಳಿಕ. ದೆವ್ವದ ಚಾಕರಿ ಮಾಡಂವ ನೀನೆ ಅಲ್ಲಾಂತ ಅಣ್ಣಿ ಅಣ್ಣ ಹೇಳ್ದೊ. ಬೇಡ ನೀವೆ ಹೇಳಿಕಣಿ ಹಿರಿಯೊವು ಇರಿಕಾಕನ ನಾವು ಹೇಳ್ದು ಸರಿ ಆದುಲೆಂತ ಮತ್ತೆ ರಾಗ ಎಳ್ದೊ ಅಪ್ಪ. ಹಾಂ ಹೇಳಿಕಂಬೊದು ಎಂತಂತೇಳಿರೆ ಕಾಲಾವಧಿನಾಂಗೆ ಈ ವರ್ಷನೂ ಮಳೆಗಾಲ ಶುರುಗೆ ಮನೆ ದೆವ್ವ ನಮ್ಮ ಕಲ್ಲುರ್ಟಿಗೆ ಇಕ್ಕುದು ಪದ್ಧತಿ. ಹಾಂಗೆ ಈ ವರ್ಷನೂ ಮಾಡೊಕೂಂತ ನಿರ್ಧಾರ ಮಾಡಿ ಒಂದು ಮೊಟ್ಟೆ ಇಸದ ಹೇಂಟೆ ಕೋಳಿನ ನೋಡಿಕಂಡಿದ್ದೊ. ಕೋಳಿಗಳಿಗೆ ಗೂಡು ಇಲ್ಲದರ್‌ಂದ ಮರಲಿ ಕುದ್ರುದ್. ಮೊನ್ನೆ ಎಂತದೋ ಕತ್ತಲೆಗೆ ಕಾಡ್‌ಕೊತ್ತಿನೋ, ಕುದ್ಕನೋ ನಡೀರ್ಲ್‌ಗ್ ಕೋಳಿನ ಮರಂದ ಹಾರ್ಸಿ ಅದರ ಪಡೆ ಮುತ್ತಿಕೆ ಹಿಡ್ಕೊಂಡ್ ಹೋತ್. ಅದೆಲ್ಲ ಎಂತಕ್ಕೆ ಅಪ್ಪ... ಮಂಜ ಅಜ್ಜರಿಗೆ ಬೊಯ್ತ್ ಅದ್ಕೆ ಹೇಳ್ದ್ ನೀನೇ ಹೇಳಿಕಾಂತ. ಇರ್ಲಿ ಹಾಂಗೆ ಹಂಞ ಸಮಯ ಕಳ್ದ್ ಈಗ ಇನ್ನೊಂದು ಹೇಂಟೆನ ಕೊಂದು ನಿಂಗೆ ಬಳ್ಸ್ಯೊಳ. ಈ ಕೋಳಿನ ಕೊಂದದರ್ಲಿ ಆಗಲಿ ಮೀದ ನೀರ್‌ಲಿ ಆಗಲಿ, ಮಾಡ್ದ ರೊಟ್ಟಿಲಿ ಆಗಲಿ, ಗೈಪುಲಿ ಆಗಲಿ ನಿಂಗೆ ಬಳ್ಸಿದ ರೀತಿಲಿ ಆಗಲಿ ಅನೇಕ ತರದ ತೊಪ್ಪು ಇರ್ದು. ಆ ತೊಪ್ಪುನ ಒಪ್ಪಿಸಾರಿಸಿಕಂಡ್ ಮಕ್ಕ ಮರಿಗಳಿಗಾಗಲಿ ಬೆಳೆ ಪೈರಿಗಾಗಲಿ ಕೊಟ್ಟಲ್ಲಿ ಆಗಲಿ, ತಂದಲ್ಲಿ ಆಗಲಿ, ಹೋದಲ್ಲಿ ಆಗಲಿ, ಬಂದಲ್ಲಿ ಆಗಲಿ ಏನೊಂದು ಕುಂದುಕೊರತೆ ಬಾರದಂಗೆ ಕಾಪಾಡುವ ಪುಣ್ಯಕೀರ್ತಿ ಆ ಕಲ್ಲುರ್ಟಿ ಸೇರುವಂತದ್ದು. ಇನ್ನ್ ನಾ ಹೇಳುವ ಬಿನ್ನೆ ಅಲ್ಲ, ನನ್ನ ಹಿರಿಯೊವು ಹೇಳಿಕಂಬ ಬಿನ್ನೆ ಸ್ವಾಮಿ... ಅಕ್ಕಿ ಹಾಕಿ ಎಲ್ಲೊವು ಒಮ್ಮೆ ತಿರ್ಗಿ ನಿಲ್ಲಿ ನೋಡ ಉಗ್ಗಪ್ಪ ಹೇಳ್ದೊ. ಎಲ್ಲವು ತಿರ್ಗಿ ನಿತ್ತೊ. ಹಂಞ ಹೊತ್ತು ಕಳ್ತ್. ಸಾಕ್ ಕೈ ಮುಗೆನಿ. ಎಲ್ಲ ಕೈ ಮುಗ್ದು ಆದ ಮೇಲೆ ಆ ಎಡೆಗಳಿಗೆ ಹಂಞ ನೀರ್ ಹಾಕಿ ಎಡೆಗಳ ಚೂರು ಜಾರ್ಸಿ ಬುಡು. ಉಗ್ಗಪ್ಪ ಅಪ್ಪಂಗೆ ಹೇಳಿ ಕೈ ಮುಗ್ದು ಹೊರಗೆ ಬಂದೊ. ಬಾಕ್ಯಾಕನ ವಾಪಾಸ್ ಹೇಳಿ. ಆ ಎಲೆ ಅಡಿಕೆ ಹಿರಿಯೊವುಕೆ ನೆಂಟ್ರಿಗೆ ಕೊಡಿ, ಮತ್ತೆ ಕಳ್ಳಿಲಿದ್ದದರ ಸಹ

ನೆಂಟ್ರಿಗೆಲ್ಲ ಕೊಡುಂತ ಅಪ್ಪಂಗೆ ಹೇಳ್ದೊ. ಅಪ್ಪ ಉಗ್ಗಪ್ಪ ಹೇಳ್ದಾಂಗೆ ಎಲ್ಲವು ಕೈ ಮುಗ್ದ್ ಆದ ಮೇಲೆ ಚೊಂಬುಲಿದ್ದ ನೀರ್‌ನ ಕೈಲಿ ಚುಮುಕಿಸಿ ಎಡೆ ಜಾರ್ಸಿದೊ.. ದೆವ್ವಕ್ಕೆ ತಂದ ಕಳ್ಳ್ ಸಾರಾಯಿನ ಹಂಞ ಪಾಲ್ ಮಾಡಿ ಎಲ್ಲವು ಕುಡ್ದೊ. ಹಾಂಗೆ ಹಂಞ ಹಂಞ ಮಕ್ಕಳಿಗೂ ಕೊಡಿನೆ ಅದ್ ದೆವ್ವದ ಪ್ರಸಾದ ಇರ್ಲಿಂತ ಉಗ್ಗಪ್ಪ ಹೇಳ್ದೊ. ಹೌದು ಪ್ರಸಾದ! ಹಾಂಗೆ ಮತ್ತೆ ಕುಡ್ಯಕೆ ಕಲ್ತವೆ. ಅದ್ಕೆ ಹೇಳ್ದು 60 ಕಳ್ದ ಮೇಲೆ ಅರ್ಲೋ ಮೊರ್ಲೋಂತ. ಅಪ್ಪ ಉಗ್ಗಪ್ಪಂಗೆ ಎರ್ಡ್ ಬೊಯ್ದೊ. ಬೇಡ ಬೇಡಪ್ಪ ಮಕ್ಕಳಿಗೆ ಕೊಡ್ಬೊಡಿ. ಈಗ ನಾವು ಕುಡ್ಯಕೆ ಕಲ್ತ್ ಹಾಳಾದ್ ಸಾಕ್. ಇನ್ನ್ ಅವು ಹಾಳಾದು ಬೇಡಾಂತ ಕುಡ್ಯಕೆ ಶುರು ಮಾಡೊವು ಹೇಳಿಕಾಂದೊ. ಒಂದು ಕಡೆಂದ ಮಕ್ಕಳಿಗೆ ಪಾಲ್ ಕೊಟ್ಟರೆ ಅಷ್ಟ್ ನಾವುಗೆ ಕಮ್ಮಿ ಆದೆಲ್ಲಾಂತ ಅವರ ಮನ್ಸ್‌ಲಿ ಇದ್ದಿರ್ದು. ಅಮ್ಮ ಹಾಂ ಸಾಕ್ ಸಾಕ್ ಇನ್ನ್ ಊಟ ಮಾಡೊಮೊ. ಗಂಟೆ 9 ಕಳ್ತ್ಂತ ಬೊಬ್ಬೆ ಹಾಕಿತ್. ದೆವ್ವಕೆ ಇಕ್ಕಿದ ಮೇಲೆ ಇನ್ನ್ ಯಾರೂ ಮುಟ್ಟಕ್. ಅಮ್ಮ ಎಲ್ಲದರ ತೋಂಡಿ ಉಪ್ಪು ಆಗುಟಾಂತ ನೋಡಿಕಂಡ್ ಎಲ್ಲರ ಕುದ್ರಿಕೆ ಹೇಳ್ದೆ.. ಉಗ್ಗಪ್ಪಂಗೆ ಅಗ್ಯಕೆ ಆದುಲೆಂತ ಹೇಳಿ ದೆವ್ವಕ್ಕೆ ಎಡೆ ಇಕ್ಕಿದರ್ಲಿ ರೊಟ್ಟಿನ ತೆಗ್ದ್ ಖಾಲಿ ಹುಗ್ಗೆನೂ ಮತ್ತೆ ಕರಿಯಡ ತುಂಡುನೂ ಕೊಟ್ಟೊ. ಅಪ್ಪಂಗೆ ಒಂದು ಎಡೆ. ಬಟ್ಟಕಾಯಿ ಇದ್ದದ್ ಅಪ್ಪಂಗೆ. ಹೆಂಗೂ ಪೂಜಾರಿಗಲ್ಲ. ಇನ್ನು ಉಳ್ದವ್ಕೆ ಇನ್ನೊಂದು ಎಡೆನ ಪಾಲ್ ಮಾಡಿ ಪ್ರಸಾದಂತ ಹಂಞ ಹಂಞ ಹಾಕಂಡ್ ಮತ್ತೆ ಬೇರೆ ರೊಟ್ಟಿನೂ ಕೋಳಿಗೈಪು ಹುಗ್ಗೆ ಹಿಂಗೇ ಎಲ್ಲೊವು ಊಟ ಮಾಡ್ದೊ. ಉಂಡುಕಂಡಿದ್ದಾಂಗೆ ಸಣ್ಣ ಪಿಳ್ಳಿ ಉಗ್ಗಪ್ಪನೊಟ್ಟಿಗೆ ಕೇಳ್ತ್. ನೀವು ದೆವ್ವಕೆ ಇಕ್ಕಿದ ಮೇಲೆ ತಿರ್ಗಿ ನಿಲ್ಲಿಕೆ ಯಾಕೆ ಹೇಳ್ದ್ ಉಗ್ಗಪ್ಪಾ. ಅದಾ ದೆವ್ವ ಬಂದ್ ಇಕ್ಕಿದರ ತಿಂಬಕೇಂತ ಉಗ್ಗಪ್ಪ ಹೇಳ್ದ್. ಅಂದರೆ ಇಕ್ಕಿದ್ ಹಾಂಗೆ ಇತ್ತ್. ನೀವು ತಿಂಬೊದು ಅದರ್ನೆಲ್ಲಾಂತ ಕೇಳ್ತ್. ಉಗ್ಗಪ್ಪ ನೆಗಾಡಿಕಂಡ್ ದೆವ್ವಕ್ಕೆ ಗಾಳಿ ಆಹಾರ ಮಂಞ ಉಳ್ದದರ ನಾವು ಪ್ರಸಾದಂತ ತಿಂಬೊದುಂತ ಹೇಳಿಕಂಡ್ ಎಲ್ಲೊವು ನೆಗಾಡಿಕಂಡ್ ಊಟ ಮುಗ್ಸಿದೊ.

* * * * * *

# ಕಾವೇರಿ ಕಪ್

ಕ್ಷಿತಿಜ ಕೆ.ಜಿ.

ನಾನು ಬೆಳ್ಗೆ ಬ್ಯಾಗ ಎದ್ದ್ ರೊಟ್ಟಿ ತಟ್ಟಿ ಮಕ್ಕಳನೆಲ್ಲಾ ಹೊರಡ್ಸಿ ಸ್ಕೂಲಿಗೆ ಕಳ್ಸಿದೆ. ಮನೆ ಕೆಲ್ಸ ಎಲ್ಲಾ ಮುಗ್ಸಿ ಸುಸ್ತಾಗಿ ಸೊಂಟ ಬಿದ್ದ್ ಹೋಗಿತ್ತ್. ಸ್ವಲ್ಪ ಕೂರ್‍ನೊತಾ ಮುಂದೆ ರೂಮ್‌ಗೆ ಬಂದ್ ಕುದ್ದೆ. ಅಲ್ಲೆ ಮುಂದೆ ಬಿದ್ದಿದ ಪೇಪರ್ ತಕಂಡ್ ಓದಿದೆ. ಪೇಪರ್‌ನಲ್ಲಿ ಗೌಡ ಜನಾಂಗದ ಬೆಳ್ಳಿ ಹಬ್ಬ ಕಾರ್ಯಕ್ರಮ ಕುಶಾಲನಗರದಲ್ಲಿ ಬಹಳಾ ಯಶಸ್ವಿ ಪೂರಕವಾಗಿ ನಡ್ಕಂಡ್ ಬಂದದ್ ಕೇಳಿ ಹೆಮ್ಮೆ ಪಟ್ಟೆ. ಹೋಕೆ ಆತ್ಲೆತ ಬೇಜಾರನೂ ಆತ್. ಅಲ್ಲೆ ಕೆಳಗೆ ಗೌಡ ಜನಾಂಗದ 'ಕಾವೇರಿ ಕಪ್' ಅದೇ ಭಾನುವಾರ ತಾರೀಕ್ 28 ರಂದ್ ಮಡಿಕೇರಿಲಿ ನಡ್ದದೆ ಎಲ್ಲಾ ಗೌಡ ಜನಾಂಗದ ಬಂಧುಗ ಬರಕುತ ಕರ್‍ದಿದ್ದೊ. ಎಲ್ಲೊ ಮನ್ಸ್‌ಲ್ಲಿ ಅದಿಕ್ಕೆ ಹೋಗೆ ಹೋಕುತ ಆಸೆಯಾತು. ಏನೆಯಾಗಲಿ ಹೋಕುತ ದೃಢವಾಗಿ ನಿರ್ಧರಿಸಿದೆ. ಹೀಗೆ ಪೇಪರ್ ಓದ್ತಿದ್ದ ನಾನ್ ತಲೆಯೆತ್ತಿ ನೋಡ್ಕನ ದನಗ ಎಲ್ಲಾ ಮುಂದೆ ಹೂತೋಟ ಮೇಯ್ತಿದ್ದೊ. ಬೆರ್‍ಸಿಕೆ ಓಡಿ ಹೋದೆ.

ಮಕ್ಕಳೆಲ್ಲಾ ಮನೆಗೆ ಬಂಧೊ. ತಿಂಡಿ ಕೊಟ್ಟು ಹೋಮರ್ಕ್ ಮಾಡ್ಸಿ, ರಾತ್ರಿ ಅಡಿಗೆ ಮಾಡ್ದೆ ನಂತರ ಮಕ್ಕಳೆಲ್ಲಾ ಊಟ ಮಾಡಿ ಮಲ್ಗಿದೊ. ನಾನು ಗಂಡನ ಜೊತೆ ಪೇಪರ್‌ನಲ್ಲಿ ಬಂದದರ ಬಗ್ಗೆ ಮಾತಾಡ್ದೆ.

ಅಲ್ಲ, ಆ ಕಾವೇರಿ ಕಪ್‌ಗೆ ನಾವೆಲ್ಲಾ ಹೋಗಿದ್ದರೆ ಲಾಯ್ಕ ಇತ್ತ್. ಹೇಗಿದ್ರು ಭಾನುವಾರ ಮಕ್ಕಳಿಗೆಲ್ಲಾ ರಜೆ ಇದ್ದದೆ. ನಾವೆಲ್ಲಾ ಪೋಯಿತ ಕೇಳ್ದೆ.

ಆಗ ಅವು ನಿನ್ನ ಸುಡಿಕೆ ಕಪ್ ಗಡ ಕಪ್ ಈ ವಯಸ್

ಕಾಲದಲ್ಲಿ ಕ್ರಿಕೆಟ್ ಆಡ್ನೆತ ಕೇಳ್ಯ. ನಾನೇನ್ ಆಡುದ್ಲಲ್ಲೆ ನೋಡಿಕೆ ಪೋಯಿತ ಕೇಳ್ದೆ. ಆಗ ಅವು ಬೇಕಿರೆ ಹೋಗ್ ನಾನೇನ್ ಆಡ್ಲೆ, ನೋಡ್ದುದ್ಲಲ್ಲೆ. ನಾ ಬಾದ್‌ಲೆ. ನನ್ ತಲೆ ತಿನ್ಬಡ. ಸುಮ್ನೆ ಬಿದ್ಕತ ಹೇಳ್ದೊ.

ಮನ್ಸಲಿ ಕಟ್ಟಿದ ನೂರು ಆಸೆ ಒಮ್ಮೆಗೆ ಮುರ್‍ದೋತು. ಪರವಾಗಿಲ್ಲೆ ಅಮೆ ದೇಚಕ್ಕನ ಜೊತೆ ಪೋಯಿತ ಮನ್ಸಲೇ ಅಂದ್‌ಕಂಡ್ ಸುಮ್ನೆ ಮಲಗಿದೆ.

ಮಾರನೇ ದಿನ ಹಾಲ್ ಕರ್‍ಯಕೆತ. ಕೊಟಗೆಗೆ ಹೋಕಾನ ದಾರೀಲೆ ಅಮೆ ದೇಚಕ್ಕನ ಮನೆ ಮುಂದೆ ನಿಂತ್ ದೇಚಕ್ಕ ದೇಚಕ್ಕಾಂತ ಕರ್‍ದೆ. ಒಳಗೆಂದ ದೇಚಕ್ಕ ಒಳಗೆ ಬಾನೆತ ಕರ್‍ತ್.

ಆಗ ನಾನು, ದೇಚಕ್ಕ ಭಾನುವಾರ ಗೌಡ ಜನಾಂಗದ 'ಕಾವೇರಿ ಕಪ್' ಜಂಬರ ಉಟ್ಟು. ಅದೂ ಮಡಿಕೇರಿಲೇ. ನಾವಿಬ್ಬರೂ ಪೋಯಿತ ಕೇಳ್ದೆ. ದೇಚಕ್ಕ, ಯಾವ ದಿನತ ಮತ್ತೆ ಕೇಳ್ತ್. ಆಗ ನಾನ್ ನಾಡ್ದ್ ದೇಚಕ್ಕ ಭಾನುವಾರತ ಹೇಳ್ದೆ.

ಆಗ ದೇಚಕ್ಕ, ಅಯ್ಯೋ ಆ ದಿನ ಆದ್ಲೆ. ನಮ್ಮಲ್ಲಿ ಆ ದಿನ ಹೊಸ ಕೆರೆ ತೆಗೆಯುದುತ್ತೆಳ್ತ್.

ನಾನ್ ಆಗ ಪರವಾಗಿಲ್ಲೆ ಬುಡು, ಶಾಂತಿ ಟೀಚರ್ ಜೊತೆ ಹೋನೆತ್ತೆಳ್ದೆ.

ಹಾಲ್ ಕರ್‍ದ್ ಬಾಕನ ಶಾಂತಿ ಟೀಚರ್ ಮನೆ ಕಡೆಂದಾಗಿ ಬಂದೆ. ಕ್ರಿಸ್‌ಮಸ್‌ಗೆ ಟೀಚರ್‌ಗೆ ರಜೆ ಇದ್ದ್. ಅವು ಮನೇಲೇ ಇರ್‍ವೋತ ಗೊತ್ತಿತ್ತ್.

ಮನೆ ಮುಂದೆ ನಿಂತ್ "ಶಾಂತಿ ಟೀಚರ್"ತ ಕರ್‍ದೆ. ಬಂದೆ, ಬಂದೆ... ತ ಹೇಳ್ಕಂಡ್ ಶಾಂತಿ ಒಳಗೆಂದ ಬಾತ್. ಬಾರೀ ಅಪರೂಪ ಅಲ್ಲ. ನೀ ದೊಡ್ಡ ಜನ ಆದ ಈಗತ ಹೇಳ್ಕನ ನಾನ್ ಇಲ್ಲೆ ಟೀಚರ್ ಬೆಳೆ ಹೊರ್‍ದು ಸ್ವಲ್ಪ ಬಿಜಿ ಇದ್ದೆ. ನೋಡಿ ಟೀಚರ್ ನೇರ ವಿಶ್ಯಕ್ಕೆ ಬನ್ನೆ ಅಲ್ಲ ಟೀಚರ್ ನೀವು ಪೇಪರ್ ನೋಡ್ದರಿಯಾ 'ಕಾವೇರಿ ಕಪ್' ಬಗ್ಗೆತ ಕೇಳ್ಕನ. ಅವು ಹ್ಞೂ ನೋಡ್ದೆ ಭಾನುವಾರ ಮಡಿಕೇರಿಲಾತ ಕೇಳ್ದೊ. ಆಗ ನಾವಿಬ್ಬರೂ ಪೋಯಾ ಹೇಗಿದ್ರು ಭಾನುವಾರ ನಿಮ್ಗೆ ಶಾಲೆ ಇರ್‍ದುಲ್ಲೆ. ಅಲ್ಲತ ಕೇಳ್ಕನ ಅವು ನೋಡ್ನೆ ರಜ ನಮ್ಗೆ ಭಾನುವಾರ ಮಾತ್ರ. ಮನೆ ತುಂಬಾ ಕೆಲ್ಸ ಇದ್ದದೆ. ಅಷ್ಟೆ ಅಲ್ಲ ಮಕ್ಕಳ ಪರೀಕ್ಷೆ ಪೇಪರ್ ತಿದ್ದಿಕೆ ಒಂದು ಗುಡ್ಡೆ ಉಟ್ಟು ಹಿಂಗೆ ಹೇಳ್ಕನ ನಾನ್ ಸರಿ ಆತ್ ಬುಡಿ ನಾ ಇನ್ನ್ ಬನ್ನೆತ ಹೇಳ್ದೆ ಆಗ ಅವು ಒಂದು ನಿಮಿಷ ನಿಲ್ಲ್ ಮಗಳು ಉಟ್ಟು ಬಂದದೆನಾತ ಕೇಳ್ನೆತ ಹೇಳ್ಕಂಡ್ ಶ್ರಧಾ.. ಶ್ರಧಾ..ತ ಕೂಗಿದೊ.

ಅತ್ತಾಂದ, ಶ್ರಧಾ ಏನಮ್ಮ ಮೆಲ್ಲೆ ಕರ್‍ಯಕೆ ಆಲೇನಾ ನನ್ನ ಕಿವಿಯೇನ್ ಹೊಟ್ಟಿಹೋತ್ಲೆತ ಬೊಯ್ಕಂಡ್ ಬಾತ್. ಕಿವಿ ಇದ್ದರೆ ತಾನೆ ಹೊಟ್ಟಿಹೋಕೆತ ಹೇಳ್ದ ಶಾಂತಿ ಟೀಚರ್, ಅದ್ ಸಾಯ್ಲಿ ಭಾನುವಾರ ಮಡಿಕೇರಿಲಿ ಕ್ರಿಕೆಟ್ ಕಪ್ ಉಟ್ಟು. ನೀ ಇವು ಜೊತೇಲಿ ಹೋದ್ಯತ ಕೇಳ್ಕನ ಅವ್ವು ಇಲ್ಲೆಪ್ಪ ಆ ದಿನ ದರ್ಶನ್‌ದ್ ಹೊಸ ಪಿಚ್ಚರ್ ಉಟ್ಟು, ನಂಗೆ ಅದ್ ನೋಡೇ ನೋಡುಕು. ಅದ್ ನಂಗೆ ತುಂಬಾ ಮುಖ್ಯತ ಹೇಳ್ತ್. ಆಗ ನಾನು ಅದ್ ಮಧ್ಯಾನ ಮೇಲೆ ಅಲಾ ಬೆಳ್ಗೆ ಹೋಗಿ ಬಾನೊತ ಹೇಳ್ಕನ ಅವ್ವು ಸಾರಿ ಆಂಟಿ ನಂಗೆ ಬೆಳ್ಗೆ ತುಂಬಾ ಕೆಲ್ಸ ಉಟ್ಟು. ಒಟ್ಟಿಗೆ ಅಸೈನ್‌ಮೆಂಟ್

ಎಲ್ಲಾ ಮುಗ್ಸಿ ಸಂಜೆ ಪಿಚ್ಚರ್ ನೋಡುಕುತ ಹೇಳ್ತ್. ನಾನಾಗ ಹೋಗ್ಲಿ ಬುಡು ನಾ ಸ್ವಾತಿನ ಕರ್ಕಂಡ್ ಹೋನೆಂತ ಹೇಳ್ಕಂಡ್ ಮುಂದೆ ನಡ್ದೆ.

ಮನೆಗೆ ಬಂದ ನಾನ್ ಮನೆ ಕೆಲ್ಸ ಎಲ್ಲಾ ಮುಗ್ಸಿದೆ. ಅಂದ್ ತುಂಬಾ ಕೆಲ್ಸ ಇದ್ರ್‌ಂದ ಸ್ವಾತಿ ಮನೆಗೆ ಹೋಕಾತ್ಲೆ. ಮಾರನೆ ದಿನ ಮಕ್ಕಳ್ ಶಾಲೆಗೆ ಹೋದ ಮೇಲೆ ಸ್ವಾತಿ ಮನೆಗೆ ಹೋಗಿ ಸ್ವಾತಿ... ಸ್ವಾತಿತ ಜೋರಾಗಿ ಕೂಗಿದೆ. ಅವ್ಳ ಬನ್ನೆತ ಹೇಳ್ಕಂಡ್ ಒಳಗೆಂದ ಓಡಿ ಬಾತ್. ನಿಂಗೆ ಭಾನುವಾರ ಯಾವುದಾದರೂ ಕೆಲ್ಸ ಉಟ್ಟತ ಮೆಲ್ಲೆ ಕೇಳ್ಕನ ಅವ್ಳ ಯಾಕೆತ ಕೇಳ್ತ್. ಆಗ ನಾನ್ ಮಡಿಕೇರಿಲಿ ಗೌಡ ಜನಾಂಗದ 'ಕಾವೇರಿ ಕಪ್' ಉಟ್ಟು ಹೋನೂತ ಕೇಳ್ದೆ. ಆಗ ಅವ್ಳ ಅಯ್ಯೋ ನಮ್ಮಲ್ಲಿ ಆ ದಿನ ಬೆಳೆ ಹೊರ್ದು. ಆಳ್‌ಗ ಎಲ್ಲರೂನು ಬಾಕೆ ಬೇರೆ ಹೇಳಿಯಾಗುಟು. ನಾನ್ ನಿನ್ನ ಕೂಡ ಕರ್ಯನೋತ ಇದ್ದೆತ ಹೇಳ್ತ್. ಆಗ ನಾ ಹೇಳ್ದೆ ನಂಗೆ ಬಾಕೆ ಆಲೆ. ನಾ ಮಡಿಕೇರಿಗೆ ಹೋನೆತ ಹೇಳ್ಕಂಡ್ ಮನೆಗೆ ಬಂದೆ.

ದಾರಿಗ ಎಲ್ಲಾ ಮುಚ್ಚಿ ಕತ್ತಲೇಲಿ ಕುದ್ದಿರ್ಕನ ಮನೆ ಕೆಲ್ಸ ಮಾಡ್ವ ಚೆನ್ನಿ ಬಾತ್. ತಕ್ಷಣ ನಾನ್ ಏ ಚೆನ್ನಿ ಭಾನುವಾರ ನನ್ ಜೊತೆ ಮಡಿಕೇರಿಗೆ ಬರ್‍ತ್ಯ. ನಮ್ಮ ಜನಾಂಗದ ಕಾವೇರಿ ಕಪ್ ಇದೆತ ಹೇಳ್ದೆ.

ಆಗ ಅವ್ಳ ಕ್ರಿಕೆಟ್‌ನಾ. ಅಮ್ಮವ್ರೊ, ಅದೆಲ್ಲಾ ನಂಗೆ ಆಸಕ್ತಿ ಇಲ್ಲ. ತುಂಬಾ ಬೋರ್ ಆಯ್ತದೆ. ನಾನು ಬರಲ್ಲ ಅಮ್ಮವ್ರೊ, ಕೆಲ್ಸ ಎಲ್ಲಾ ಮುಗ್ಸಿ ಚೆನ್ನಿ ಹೋತ್.

ಇಷ್ಟರವರೆಗೂ ಗೌಡ ಜನಾಂಗದ ಯಾವ ಜಂಬರಕ್ಕೂ ಹೋಗದ ನಾನು, ಇದ್ಕೆ ಹೋಗೆ ಹೋಕು, ಒಬ್ಬಳಾದರೂ ಪರವಾಗಿಲ್ಲೆತ ಮನಸ್ಸಲ್ಲಿ ಅಂದ್ಕಂಡೆ.

ಗಂಡ ಬಂದವು, ಭಾನುವಾರ ಪಾರೆ ಮನೆದ್ ಬೆಳೆ ಹೊರ್ದು, ಬ್ಯಾಗ ಎದ್ ಪೋಯಿತ್ತೇಳ್ದೊ. ಆಗ ನಾನ್ ಯಾವ ಮನೆ ಬೆಳೆ ಹೊರ್ಕೆ ನಾ ಬಾಲೆ. ನಾ ಮಡಿಕೇರಿಗೆ ಹೋಗ್ತೊಳೆತ ಹೇಳ್ಕನ ಅವು ಮಡಿಕೇರಿಗ ಯಾಕೆತ ಕೇಳ್ದೊ. ಆಗ ನಾನ್ ನಿಮ್ಗೆ ಮೊದ್ಲೆ ಹೇಳ್ದಿಲಾ ಗೌಡ ಜನಾಂಗದ ಕಾವೇರಿ ಕ್ರಿಕೆಟ್ ಬಗ್ಗೆ. ಸರಿ, ಸರಿ ಯಾರ ಜೊತೆ ಹೋಕ್ತೊಳತ ಕೇಳ್ದೊ. ಆಗ ನಾನ್ ಒಬ್ಬೆ ಹೋಕ್ತೊತೆತ ಹೇಳ್ದೆ. ಆಗ ಅವು ನಿನ್ನ ತಲೆ ಸರಿಯುಟ್ಟ, ಇಷ್ಟರವರೆಗೆ ಬಸ್ಸಲಿ ಒಬ್ಬಳೇ ಎಲ್ಲಿಗಾದ್ರ್ ಹೋಗೊಳುತ ಬಯ್ಕಂಡ್ ಕೇಳ್ದೊ. ಆಗ ನಾನ್ ಇಲ್ಲಿ ತನ್ಕ ಹೋತ್ಲೆ. ನಾಳೆ ಹೋನೆತ ಕೋಪದಲ್ಲಿ ಹೇಳ್ದೆ. ಆಗ ಅವು ಕಳ್ಳಗಿಳ್ಳ ಬಂದ್ ಕುತ್ತಿಗೆದ್ ಸರ ಕೀಳ್ಕನ ಗೊತ್ತಾದೆತ ಹೇಳ್ಕನ ನಾನ್ ಸರ ಕಿತ್ತದೆತ ಯಾರೂ ಬಸ್‌ಲೇ ಹೋಲೆನಾ, ನಾ ಹೋದು ಹೋದೆತ ಹೇಳ್ದೆ. ಆಗ ಅವು ನಿನ್ನಿಷ್ಟ ನಿನ್ನ ಜೊತೆ ಮಾತಾಡ್ದು ಒಂದೇ ಕಲ್ಲ್ ಬಂಡೆ ಜೊತೆ ಮಾತಾಡ್ದು ಒಂದೇ ಏನಾರ್ ಮಾಡ್‌ತ ಹೇಳ್ಕಂಡ್ ಗುಡಿ ಹೊದ್ದ್ ಮಲ್ಗಿದೊ.

ಆ ದಿನ ಬೆಳ್ಗೆ ಬ್ಯಾಗ ಎದ್ದ್ ತಿಂಡಿ ಮಾಡ್ದೆ. ಎಲ್ಲಾ ಪಾರೆ ಮನೆ ಬೆಳೆ ಹೊರಿಕೆ ಹೋದೊ. ನಾ ಹೊರ್ಪ್ 9.00 ಗಂಟೆ ರಾಮ ಬಸ್‌ಗೆ ಪೋಯಿತ ಅರ್ಜೆಂಟಲ್ಲಿ ಹೊರ್ಪೆ. ಬಸ್ ಸ್ಟಾಪಲ್ಲಿ ಬಂದ್ ನಿಲ್ಕನ ರಾಮ ಬಸ್ ಹೋತಾ ಉಟ್ಟು. ನಿಲ್ಸಿಕೆ ಕೂಗು ಹಾಕಿದೆ. ನಿಲ್ಸಿತ್ಲೆ. ಮುಂದೆ ಬಸ್ ಇರ್ದು 10.00 ಗಂಟೆಗೆ ವಿಜಯಲಕ್ಷ್ಮಿ. ಅಲ್ಲಿ ತನ್ಕ ಬಸ್‌ಗೆ ಕಾದ್ಕಂಡ್ ಬಿಸಿಲಲ್ಲಿ ನಿಂತೆ. 10.00 ಗಂಟೆಗೆ ಬರ್ವ ಬಸ್ ಆ ದಿನ 10.10

ಕ್ಕೆ ಬಾತ್. ಬಸ್ ಹತ್ತಿ ಮಡಿಕೇರಿಗೆ ಬಂದೆ. ಮಡಿಕೇರಿಯ ಬಸ್ ಸ್ಟಾಂಡ್‌ಲಿ ಇಳ್ದೆ. ನಂಗೆ ಮ್ಯಾಂನ್ಸ್ ಕಾಂಪೌಂಡ್‌ಗೆ ಹೋಕೆ ಸರಿ ದಾರಿ ಗೊತ್ತಿತ್ಲೆ. ಅಲ್ಲೇ ಹತ್ರ ಇರ್‍ದೂತ ಅಷ್ಟೆ ಗೊತ್ತಿತ್. ಅದ್ಕೆ ಒಂದು ಆಟೋ ಹತ್ತಿದೆ. ಆಟೋ ಎರಡು ನಿಮಿಷದಲ್ಲಿ ತಂದ್ ನಿಲ್ಸಿ 25 ರುಪಾಯಿ ಕೇಳ್ತ್. ಜಗಳ ಮಾಡಿಕೂ ಆತ್ಲೆ. ವಿಧಿಯಿಲ್ಲದೆ ಅಷ್ಟು ದುಡ್ಡು ಕೊಟ್ಟೆ.

ಮ್ಯಾನ್ಸ್ ಕಾಂಪೌಂಡ್ ಗೇಟ್ ಒಳಗೆ ಹೋಕನ ಮೌಂಟ್ ಎವರೆಸ್ಟ್ ಹತ್ತಿದ ಸಾಧನೆಗಿಂತಲೂ ದೊಡ್ಡ ಸಾಧನೆ ಮಾಡ್ದಷ್ಟ್ ಕುಷಿ ಆತ್. ಇಡೀ ಕಾರ್ಯಕ್ರಮನ ಕುಷಿಂದ ನೋಡ್ದೆ.

ಸಂಜೆ ಆಕನ ಶಾಂತಿ ಟೀಚರ್ ಮಗ ಸೊಸೆ ಬೆಂಗಳೂರಿನಿಂದ ಬಂದೊ. ಅವ್ರು ಸಂಜೆ ಅಮ್ಮನ ಮನೆಗೆ ಹೋದುತ ನಂಗೆ ಹೇಳ್ದೊ. ಅದಿಕ್ಕೆ ನಾನ್ ಮುಂಚೆನೆ ಅವು ಕಾರ್‌ಲಿ ಬನ್ನೆ, ಹೋಕನ ಕರ್‍ದ್ ಬುಡಿತ ಹೇಳ್ದೆ. ಅವ್ರು ಇಬ್ಬರೆ ಇದ್ದರಂದ ಒಪ್ಪಿಕೊಂಡ.

ಅವ್ರು ಕಾರ್ಯಕ್ರಮ ಮುಗಿಯೋ ತನ್ಕ ಇದ್ದ್ ಕೊನೆಗೆ ಕರ್‍ಕಂಡ್ ಹೋದೊ. ನಂಗೆ ತುಂಬಾ ಖುಷಿ ಆತ್.

ಮನೆಗೆ ಬಂದೆ ಹಾಕಿದ ಬೀಗ ಹಂಗೆ ಇತ್. ಅವೆಲ್ಲಾ ಬೆಳೆ ಹೊರಿಕೆ ಹೋದವು ರಾತ್ರಿ ಊಟ ಮುಕ್ಸಕಂಡೇ ಬಾದುತ ಗೊತ್ತಿತ್. ಬೆಳಿಗ್ಗೆದ್ ಉಳ್ದಿದ್ದ ಎರಡ್ ರೊಟ್ಟಿ ಬಿಸಿ ಮಾಡಿ ತಿಂದೆ. ಮತ್ತೆ ಕಾದ್ಕಂಡ್ ಕೂತೆ.

ಎಲ್ಲಾ ಸುಸ್ತಾಗಿ ಬಂದೊ. ಆತ ನಿನ್ನ ಜಂಬರತ, ಅವು ಕೇಳ್ದೊ. ಆಗ ನಾನ್, ಆತ್ ಎಷ್ಟ್ ಲಾಯ್ಕ ಇತ್ ಗೊತ್ತಾ ಅಲ್ಲಿ... ತ್ತೇಳ್ಕನ ಸಾಕ್, ಸಾಕ್ ಹಾಸಿಗೆ ಹಾಸ್, ನಾ ಕಾಲ್ ತೊಳ್ಕಂಡ್ ಬನ್ನೆ. ಸುಸ್ತಾಗಿ ನಿದ್ದೆ ಕಣ್ಣಲ್ಲಿ ಉಟ್ಟುತ ಹೇಳಿ ಹೋದೊ.

ನಾ ಹಾಸಿಗೆ ಹಾಸಿ ಮಕ್ಕಳನ ಮಲ್ಗಿಸಿ, ನಾ ಮಲ್ಗಿದೆ. ಕಣ್ಣು ಮುಚ್ಚಿಕನ ಒಮ್ಮೆ ಹೋಗೊ ಮುಂಚೆ ನಾ ಪಟ್ಟ ಕಷ್ಟ ಎಲ್ಲಾ ನೆನಪಾತ್. ಕಡೆ ಪಕ್ಷ ಜಂಬರದ ಬಗ್ಗೆ ಹೇಳ್ಕನ ಕೇಳಿಕು ತಾಳ್ಮೆ ಯಿಲ್ಲದ ಗಂಡ ಕಣ್ ಮುಂದೆ ಬಾತ್. ಬೇಜಾರ್‌ಲೆ ಕಣ್ಣ್ ಮುಚ್ಚಿದೆ. ಆದರೂ ಆ ದಿನ ಗೌಡ ಜನಾಂಗದಲ್ಲಿ ಹುಟ್ಟಿದಕ್ಕೆ ಹೆಮ್ಮೆ ಹಾಗೂ ಸಾರ್ಥಕ ಆತ್.

ಜನಾಂಗದ ಒಗ್ಗಟ್ಟಿಗೆ ಸಂಘಟನೆ ಮುಖ್ಯ. ಸಂಘಟನೆಯತ್ತ ಚಿತ್ತ ಹರಿಸದ ನಮ್ಮ ಜನಾಂಗದ ಒಗ್ಗಟ್ಟಿನತ್ತ ಹೆಂಗೇ ಕರ್‍ಕಂಡ್ ಹೋದುತ್ತ ಗ್ಯಾನ ಮಾಡುತ್ತ ಮಲಗಿದೆ.

* * * * *

ಚಿಂತನೆ

# ವಚನ ಪಾಲನೆ

– ಕುತ್ಯಾಳ ನಾಗಪ್ಪ ಗೌಡ

ಕನ್ನಡಿಗರಾದ ನಾವು ಪುಣ್ಯ ಕೋಟಿನ ನೆನಪು ಮಾಡಿಕೊಂಬುದಕ್ಕೆ ಕಾರಣ ಉಟ್ಟು. ಹಿಂದೆ ಬಂದರೆ ಒದಿಯಕಾಗದ್, ಮುಂದೆ ಹೋದರೆ ಹಾಯಕ್ಕಾಗದ್ ಎಂದ್ ನಂಬಿ ಬದುಕಿದ್ದ ಪುಣ್ಯ ಕೋಟಿ ಕನ್ನಡದ ಹಸ್. ಇದಕ್ಕೆ ವಿರುದ್ಧವಿರುವ ಜನಗಳ ನಡವಳಿಕೆಗಳ್ಂದ ತೊಂದರೆಗೆ ಒಳಗಾದವು ಕೂಡಾ ಕನ್ನಡ ನಾಡ್‌ನ ಜನಂಗಳೆ! ಪುಣ್ಯ ಕೋಟಿಗೆ ಸತ್ಯವೇ ಅಪ್ಪ, ಅಮ್ಮ ದಾರಿಲಿ ಅಡ್ಡಗಟ್ಟಿದ ಅಡ್ಡಬಲಿಪಂಗೆ ಅಡ್ಡಬಿದ್ದ್, ಕೂಸ್‌ನ ನೋಡಿಬನ್ನೆ ಅಂತ ಮಾತ್‌ಕೊಟ್ಟ್, ಮಾತಿಗೆ ತಪ್ಪದ ಪುಣ್ಯ ಕೋಟಿನ ಕತೆ ಎಲ್ಲವ್ಕೂ ಅರ್ಥ ಆವ ಉಪನಿಷತ್. ಇದರ ಬರ್ದವನ ಹೆಸರ್ ನಾವ್ಗೆ ಗೊತ್ತಿಲ್ಲೆ. ಅಂವ ಅವನ ಹೆಸರ್‌ನ ಎಲ್ಲಿಯೂ ಬರ್ತ್‌ಲ್ಲೆ. ಆದರೆ ಅಂವ ಬರ್ದ್‌ದ್ ಇಂದಿಗೂ ಬೇಕಾದ್ದೆ, ಮುಂದೆನೂ ಉಳಿವಂತದ್ದ್. ಪುಣ್ಯಕೋಟಿಯ ವಚನಪಾಲನೆ ದೊಡ್ಡ ಆದರ್ಶ.

ಯುರೋಪಿನ ಹೆಮಲಿನ್ ಪಟ್ಟಣ ಕನ್ನಡನಾಡ್‌ಲಿ ಬೊಮ್ಮನ ಹಳ್ಳಿಯಾತ್. ಇದ್ ಇಲಿಗಳ ಸಾಮ್ರಾಜ್ಯ ಆತ್. ಅಪ್ಪಿಲಿ, ಅಣ್ಣಿಲಿ,ಅಕ್ಕಿಲಿ,ಅಮ್ಮಿಲಿ, ಮಾವಿಲಿ, ಸಣ್ಣಿಲಿ, ದೊಡ್ಡಿಲಿ ಈ ಇಲಿಗಳ ಕಾಟ ತಡಿಯಕೆ ಆಗದಷ್ಟ್ ಹೆಚ್ಚಾಗಿತ್ತ್. ಜನಗ ಕಂಗಾಲಾಗಿದ್ದೊ. ಕಿಂದರಿಜೋಗಿಯೊಬ್ಬ ಎಲ್ಲಿಂದಲೋ ಪ್ರತ್ಯಕ್ಷ ಆತ್. ಕಿಂದರಿ ಬಾರ್ಸಿ ಇಲಿಗಳ ನಾಶ ಮಾಡ್ತ್. ಆದರೆ ಊರುಗೌಡ ಕೊಟ್ಟನೆಂತ ಹೇಳ್ದ ಚಿನ್ನದ ನಾಣ್ಯಗಳ ಜೋಗಿಗೆ ಕೊಟ್ಟತ್ಲೆ. ವಚನ ಭಂಗ ಮಾಡ್ತ್. ಪೀಪಿ ಊದಿದ ಕೂಡ್ಲೆ ನಿಂಗೆ ಅಷ್ಟ್ ನಾಣ್ಯ ಕೊಡಿಕೆ ಸಾಧ್ಯ ಇಲ್ಲೆಂತ ಜಬರ್ದಸ್ತ್ ಮಾಡ್ತ್. ಗೌಡ ಜೋಗಿಗೆ ಜೋರ್ ಮಾಡ್ತ್. ಜೋಗಿ ಮತ್ತೆ ಕಿಂದರಿ ಬಾರ್ಸಿತ್. ಈ ಸಾರಿ ಊರುನ ಮಕ್ಕ ಎಲ್ಲಾ ಜೋಗಿನ ಹಿಂಬಾಲ್ಸಿದೊ. ಬೆಟ್ಟದ ಗುಹೆಯೊಳಗೆ ಹೋದವು ಮತ್ತೆ ಬಾತೇ ಇಲ್ಲೆ. ಮಕ್ಕಳ ಕಳ್ಕಂಡ ಅಪ್ಪ ಅಮ್ಮ ವಚನಪಾಲನೆ ಮಾಡದ ಗೌಡಂಗೆ ಶಾಪ ಹಾಕಿದೊ. ಊರು ಸೂತಕದ ಮನೆ ಆತ್. ಇದ್ ಕುವೆಂಪು ವಚನಪಾಲನೆಗೆ ಮಹತ್ವಕೊಟ್ಟ್ ಬರ್ದ ಬೊಮ್ಮನ ಹಳ್ಳಿಯ ಕಿಂದರಜೋಗಿಯ ಕಥನಗೀತೆ.

ಅಮೇರಿಕದ ಕೃಷಿಕ ಕವಿ ರಾಬರ್ಟ್‌ಫ್ರಾಸ್ಟ್‌ನ ಆಲೋಚನೆಯ ಪರಿಚಯ ಮಾಡ್ನೆ. ಕಾಡ್‌ನ ಸಣ್ಣದಾರಿ ಹಿಮ ಬೀಳ್ತಾ ಉಟ್ಟು, ಹೊತ್ತು ಹಿಂಬೊತಾಗುಟು. ಕೆರೆಯ ನೀರ್ ಕಲ್ಲಾಗುಟು. ಆದರೆ ನಿಲ್ಲುವ ಹಾಂಗಿಲ್ಲೆ. ಮುಂದೆ ಹೋಕೇ. ಮಾತ್ ಕೊಟ್ಟಾಗುಟು. ಅದರ ನಡ್ಸೊಕು. ನಿದ್ದೆ ಮಾಡುವ ಹಾಂಗಿಲ್ಲೆ. ನಿದ್ದೆಗೆ ಮುಂಚೆ ಮೈಲ್‌ಗಳಾಚೆ ಹೋಗಿ ಕೊಟ್ಟ ವಚನ ಪಾಲನೆ ಮಾಡೊಕು. ರಾಬರ್ಟ್ ಫ್ರಾಸ್ಟ್ ಹೇಳ್ವ ಯಾತ್ರೆ ಬದ್‌ಕುವ ಮನುಷ್ಯಂಗೆ ಅಡ್ಡಿ, ಕಷ್ಟ ಇದ್ದದೇ ಆದರೆ ವಚನಪಾಲನೆ ಮಾಡೊಕಾದ್ದ್ ಮನುಷ್ಯನ ಕರ್ತವ್ಯ.

ನಮ್ಮ ದೇಶ ಸ್ವತಂತ್ರವಾದ  ಮೇಲೆ ಪಂಡಿತ್ ಜವಾಹರ್‌ಲಾಲ್ ನೆಹರು ಪ್ರದಾನಮಂತ್ರಿ ಆದ್ರೊ. ಸ್ವತಂತ್ರ ಭಾರತದೆದ್‌ರ್ ಭಾರೀ ಸವಾಲುಗಳ ಸಾಲೇ ಇತ್ತ್, ಬಡತನ ಇತ್ತ್. ಅನಕ್ಷರತೆ ಇತ್ತ್ ,ಅಸಮಾನತೆ ಇತ್ತ್. ಗಡಿಗಳಲ್ಲಿ ತಕರಾರ್ ಇತ್ತ್. ಸರ್ವರಿಗೆ ಸುಖ,ಶಾಂತಿ ನೆಮ್ಮದಿ, ಸಮೃದ್ಧಿಯ ಭರವಸೆ ಕೊಟ್ಟಾಗಿತ್ತ್. ಆದರೆ ಪ್ರಗತಿ ಆಮೆನಡಿಗೆಯ ಹಾಂಗಿತ್. ಸಮಸ್ಯೆ ಇತ್ತ್. ಆದರೂ ಪ್ರಯತ್ನ ನಡೀತಿತ್ತ್. ನೆಹರೂ ವಚನಪಾಲನೆ ತನ್ನ ಕರ್ತವ್ಯ ಅಂತ ತಿಳ್ದಿದ್ದೊ.

The woods are lovely dark and deep

I have promises to keep

And  miles to go before I sleep

ಫ್ರಾಸ್ಟನ ಕವಿತೆಯ ಈ ಗೆರೆಗಳ ನೆಹರು ತಮ್ಮ ಮೇಜಿನ ಮೇಲೆ ಬರ್ದ್ ಇಸಿಕೊಂಡಿದ್ದೊ. ವಚನಪಾಲನೆ ಮಾಡಿ ತಾನು ಪ್ರೀತಿಸ್ದ ದೇಶದ ಜನಗಳ ಮೋರೆಲಿ ಸಂತೋಷ ಕಾಣೊಕೂಂತ  ನೆಹರು ಬಯಸಿದ್ದೊ. ಫ್ರಾಸಟ್‌ನ ಕವಿತೆ ಈ ಕಾರಣಕ್ಕಾಗಿ ನೆಹರು ಅವರ ಮೇಜಿನ ಮೇಲೆ ಇತ್ತ್.

ಕನ್ನಡನಾಡಿನ 12 ನೇ ಶತಮಾನದ ವಚನಕಾಲದಲ್ಲಿ ಬಷವಣ್ಣನವರದ್ದ್ ಎತ್ತರದ ವ್ಯಕ್ತಿತ್ವ. ಎತ್ತರದ ಸ್ಥಾನಮಾನ ಬಸವಣ್ಣ ಶುಭ್ರಜೀವನದ ವಚನಕಾರ. ಮಾತ್ ಒಡವೆಯ ಹಾಂಗಿರೊಕು. ಸ್ಫಟಿಕದಂತಿರೊಕು. ಫಳ, ಫಳ ಹೊಳಿಯೊಕು. ಮಾತಿನಿಂದ ತೇಜಸ್ಸು ಹೊರಬರೊಕು. ಕೇಳ್ಸಿಕೊಂಡ ದೇವ್ರು ಮೆಚ್ಚಿ ಹೌದು, ಹೌದು, ಅದ್ ಸರಿ ಅಂತ ಹೇಳ್ವ ಹಾಂಗಿರೊಕು. ಇಷ್ಟ್ ಸಾಕಾದುಲ್ಲೆ. ಕೂಡಲಸಂಗಮದೇವ್ರು ಒಲಿಯೋಕಾದರೆ ಸ್ಫಟಿಕದಂತ ಮಾತ್ ಸಾಲದ್, ಒಡವೆಯಂತ ಮಾತ್ ಇದ್ದರೂ ಪ್ರಯೋಜನ ಇಲ್ಲೆ. ಮಾತ್ ಫಳ ಫಳ ಹೊಳಿತಿದ್ದರೂ ಕೂಡಲಸಂಗಮ ದೇವ್ರು ಒಲಿಯಕ್ಕಿಲ್ಲೆ. ಕೂಡಲ ಸಂಗಮ ದೇವ್ರು ಒಲಿಯೊಕರೆ ಮಾತಿನಂತೆ ನಡ್ದ್ ತೋರ್ಸೊಕು. ನುಡಿ ಬೇರೆ, ನಡೆ ಬೇರೆ ಅಲ್ಲ. ನುಡಿ ಬೇರೆ ನಡೆ ಬೇರೆ ಆದರೆ ಸಮಾಜ ನಿಂತ ನೀರಿನ ಹಂಗೆ ಕೊಳ್ತ್ ಹೋದ್ದೆ .ಬಸವಣ್ಣನ ವಚನಕ್ಕೆ ಕೂಡಲಸಂಗಮದೇವ್ರ ರುಜು ಉಟ್ಟು. ಇದರ್ಲಿ 'ಕೂಡು' ಪದ ಉಟ್ಟು, 'ಸಂಗಮ' ಅಂತ ಮತ್ತೊಂದು ಪದ ಉಟ್ಟು 'ಕೂಡು' ಪದ ಒಟ್ಟಾಗುವಿಕೆನ ಸೂಚಿಸಿದೆ. 'ಸಂಗಮ' ಪದ ಒಟ್ಟಾಗಿ ಹರಿಯುದರ ಸೂಚಿಸಿದೆ. ಚಲನಶೀಲತೆ ಬಸವಣ್ಣನ ಧೋರಣೆ ವಚನಪಾಲನೆಗೆ ದೈವತ್ವದ ಸ್ಥಾನ ಕೊಟ್ಟ ಚಿಂತಕ ಬಸವಣ್ಣ.

ವಚನಪಾಲನೆಯ ಮಹತ್ವನ ವಿವರ್ಸಿಕೆ ಬೇಕಾಗಿ ಪುಣ್ಯ ಕೋಟಿ, ಕಿಂದರಿಜೋಗಿ,  ಫ್ರಾಸ್ಟನ ಕವಿತೆ, ನೆಹರೂದಿನಚರಿ, ಬಸವಣ್ಣನ ವಚನ ಇತ್ಯಾದಿ ಸಂಗತಿಗಳ ಹೇಳ್ದೆ ಈ ದಿನಗಲ್ಲಿ ವಚನಪಾಲನೆಗೆ ರಜೆ ಸಿಕ್ಕಿದ ಹಾಂಗೆ ಉಟ್ಟು. ನಾಗರಿಕತೆ ಅಂದರೆ ಕೇವಲ ಸ್ಪರ್ಧೆ ಅಲ್ಲ ನಾಗರಿಕತೆ ಉರ್ದಾಟಕ್ಕೆ ಉತ್ತೇಜನ ಕೂಡಿಕೆ ಆಗದ್. ವಚನಪಾಲನೆ  ಸಾಂಸ್ಕೃತಿ ಸಂಗತಿ. ಸಂಸ್ಕೃತಿ ನಾಗರಿಕತೆಯ ಹೃದಯ ಅಂತ ತಿಳಿಯೊಕು. ವಚನಪಾಲನೆಗೆ ರಜೆ ಕೊಡಿಕೆ ಆಗದ್ ಕೊಟ್ಟರೆ ಕೆಟ್ಟ್ ಹೋತ್ ಅಂತ ಪಶ್ಚಾತ್ತಾಪ ಪಡುವ ಕಾಲ ಬಂದದೆ.

# ಕೊಡಗು ಹುತ್ತರಿ

ಕಟ್ರತನ ಕೆ. ಬೆಳ್ಯಪ್ಪ.

ಹುತ್ತರಿಯೇ ಪುತ್ತರಿ (ಹೊಸ ಅಕ್ಕಿ) ಹೊಸ ಅಕ್ಕಿ ಸಂಭ್ರಮ ಸಡರದೊಟ್ಟಿಗೆ ಆರತಿ ಬೆಳಗಿಸಿ ಮನೆ ಸೇರ್ಸಿಕಂಬ ಹಬ್ಬನೇ ಕೊಡಗಿನ ಹುತ್ತರಿ ಹಬ್ಬ. ಅನ್ನದಾತ ತನ್ನ ಗದ್ದೆನಾ ಹೂಡಿ ಹದ ಮಾಡಿ ಭತ್ತನ ಗದ್ದೆಗೆ ಚೆಲ್ಲಿ, ಅಗೆನಾ ನಾಟಿ ಮಾಡಿ ಸುಮಾರ್ 100 ದಿನಂದ 120 ದಿನಗಳವರೆಗೆ ಆರೈಕೆ ಮಾಡಿ ಕೊಯ್ಲಿಗೆ ಸಿದ್ಧ ಆಕನಾ ಎಂದರೆ ನವೆಂಬರ್ ತಿಂಗಳ ಕೊನೆಂದ ಡಿಸೆಂಬರ್ 15ರ ಒಳಗೆ ಹುಣ್ಣಿಮೆ ಚಂದ್ರನ ಬೆಳದಿಂಗಳ ಕೃತಿಕ ಅಥವಾ ರೋಹಿಣಿ ನಕ್ಷತ್ರಲಿ ಮನೆ ಮನೆಗಳಲೀ ಜರುಗುವ ಸಂಭ್ರಮದ ಹಬ್ಬವೇ ಹುತ್ತರಿ ಹಬ್ಬ. ನಮ್ಮ ಕೊಡಗಿನ ಹುತ್ತರಿ ಹಬ್ಬಕ್ಕೂ ಕೇರಳದ 'ತಿರುವೋಣಂ' ಹಬ್ಬಕ್ಕೂ ಬಹಳ ಹತ್ತರದ ನೆಂಟಸ್ತನ ಉಟ್ಟು. ಕೇರಳದ 'ತಿರುವೋಣಂ' ಮುಗ್ದ್ ಸರಿ ಸುಮಾರಿಗೆ 90 ದಿನಗಳಲೀ ಕೊಡಗ್‌ನ ಹುತ್ತರಿ ಹಬ್ಬ ಆಚರಣೆ ಆದೆ. ಈ ಲೆಕ್ಕಚಾರಕ್ಕೆ ಪಂಚಾಂಗ ನೋಡುದ್ದಾಗಲೀ, ಜ್ಯೋತಿಷ್ಯನ ಕೇಳುವುದಾಗಲೀ ಬೇಡವೇ ಬೇಡ. ಆ 90 ದಿನಗಳ ಆಸುಪಾಸುಲೀ ಬರುವ ಹುಣ್ಣಿಮೆನ ಕೃತಿಕಾ ಅಥವಾ ಅದರ ಮಾರನೆ ದಿನ ರೋಹಿಣಿ ನಕ್ಷತ್ರಲೀ ಹುತ್ತರಿ ಹಬ್ಬ ಜರುಗುದು ಶಾಸ್ತ್ರ ಸಿದ್ಧ. ಕೊಡಗಿನ ಮತ್ತೆ ಕೇರಳದ ನೆಂಟಸ್ತನದ ಬಗ್ಗೆ ನಾನ್ ಮೇಲೆ ಹೇಳಿದಂಗೆ, ಕೊಡಗಿಗೆ ಹೆಚ್ಚಿನ ದೇವರುಗಳೆಲ್ಲಾ ಕೇರಳಂದ ಬಂದವು. ಇಗ್ಗುತ್ತಪ್ಪ, ಬೈತೂರಪ್ಪ, ಕಲ್ಯಾಟಪ್ಪ, ಪಾಲೂರಪ್ಪ, ಬೆಂದುರುಕೋಲಪ್ಪ ಮತ್ತೆ ಪನ್ನಂಗಲಾತಮ್ಮ ಹಿಂಗೆ ಸುಮಾರ್ ದೇವರುಗ ಕೇರಳಂದ ಕೊಡಗಿಗೆ ಬಂದ್ ನೆಲೆ ನಿಂತೊಳೊ. ಈ ದೇವರುಗ ಎಲ್ಲಾ ಒಂದುಗೂಡಿ ಕೊಡಗ್‌ನ ನಾಲ್ಕ್‌ನಾಡ್ ಬೆಟ್ಟ ಒಂದರ್ಲ್ ಸ್ವಲ್ಪ ಸಮಯ ನೆಲೆನಿಂತ್ ಪನ್ನಂಗಾಲತಮ್ಮಂತ ಹೇಳುವ ಹೆಣ್ಣ್ ದೇವರು ಬೆಂಕಿ ಇಲ್ಲದೆ ಮರುಳುಗುಡ್ಡೆಲ್ಲಿ ಪಾತ್ರೆ ಇಟ್ಟ್ ಅಡುಗೆ ಮಾಡಿ ಉಪ್ಪಿಲ್ಲದೆ ಊಟ ಮಾಡಿ ಎಲೆಡಿಕೆ ತಿಂದ್ ಯಾರ್‌ದ್ ಕೆಂಪು ಕೆಂಪುತ' ನೋಡಿ ಆ ಮೇಲೆ ಬೇರೆ ಬೇರೆ ಊರುಗಳಿಗೆ ಹೋಗಿ ನೆಲೆ ನಿಂತೊ. ಇಗ್ಗುತ್ತಪ್ಪ ದೇವರು 'ನಾಲ್ಕ್‌ನಾಡಿಲೇ ನೆಲೆನಿಂತತ್' ಪಾಲೂರಪ್ಪ ಪಾಲೂರ್ಲೆ ನಿಂತತ್. ಪನ್ನಂಗಾಲತ್ತಮ್ಮೆ ಕಕ್ಕಬೆಯ ಚೇಲಾವರಲೀ ನೆಲೆನಿಂತತ್. ಬಾಕಿ ಉಳ್ದವು ಬೇರೆ ಬೇರೆ ಊರುಗಳ್‌ಲಿ ನೆಲೆಯೂರಿದೊ. ನಾವು ಕೊಡಗ್‌ನವು ಶ್ರೀ ಇಗ್ಗುತ್ತಪ್ಪ ದೇವರ ಹೆಸ್‌ರ್ಲಿ ಹುತ್ತರಿ ಹಬ್ಬನಾ ಆಚರಣೆ ಮಾಡ್ವೆ. ನಾಡ್‌ಗಳಲೀ ಹುತ್ತರಿ ಹಬ್ಬನ ಆಚರಣೆ ಮಾಡುಕೆ ಮೊದ್ಲೆ ಇಗ್ಗುತ್ತಪ್ಪ ದೇವರ ಹೆಸರ್ಲಿ ಹುತ್ತರಿ ಹಬ್ಬನ ಆಚರಣೆ ಮಾಡ್ವೆ, ಅಲ್ಲಿ ಒಂದು ದಿನಕ್ಕೆ ಮುಂದೆ ದೇವರಿಗೆ ಬತ್ತದ ಕದ್‌ರ್ ಕೊಯ್ಯಿದ್ ನೆರೆಕಟ್ಟಿ ದೇವರ್‌ನ್ ಪೂಜಿಸುವೆ.

ಹುತ್ತರಿ ಹಬ್ಬನ ಆಚರಿಸುವ ಕ್ರಮ: ಹುತ್ತರಿ ಹಬ್ಬ ಆಚರಿಸುವ ಮೊದ್ಲು ತಮ್ಮ ತಮ್ಮ ಮನೆಗಳಿಗೆ ಹಂಗೆನೆ ಐನ್‌ಮನೆಗೂ ಕೂಡ ಸುಣ್ಣ ಬಣ್ಣ ಬಳ್ದ್

ಅಲಂಕಾರಗೊಳ್ಳುವೆ. ಹಬ್ಬದ ದಿನ ಅವರವರ ವಾಸದ ಮನೆ, ಮನೆಯಂಗಳ, ಒಕ್ಕಲು ಕಣ ಇವುಗಳನ್ನೆಲ್ಲಾ ಶುಚಿಗೊಳಿಸಿ ತಳಿರು ತೋರಣಗಳಿಂದ ಪೊರ್ಲು ಮಾಡಿ, ಒಕ್ಕಲು ಕಣದ ಭೇಟಿ ಸುತ್ತಲೂ ಬಣ್ಣ ಬಳೆದು ಶೃಂಗಾರ ಮಾಡಿ ಭೇಟಿ ಕಂಬಕ್ಕೆ ತೋರಣ ಕಟ್ಟಿ, ಚೆಂಡು ಹೂಗಳ ಮಾಲೆ, ಆಲದ ಎಲೆ, ಕುಂಬಳ ಮರದ ಸೊಪ್ಪು, ಗೇರು ಮರದ ಸೊಪ್ಪು, ಈಇಣ್ಣಿಂತ ಹೇಳುವ ಬೊಳ್ಳಿ ಮತ್ತೆ ನೆರೆ ಕಟ್ಟಿಕೆ ಬೇಕಾದ ಅಚ್ಚಿನಾರ್ ಹಿಂಗೆ ಇವುಗಳನ್ನೆಲ್ಲಾ ಕೂಡ ಹಾಕಿ ಇಟ್ಟಕೊಣ್ಕ್. ಹಂಗೇನೇ ಊರು ದೇವಸ್ಥಾನಂದ ಪುಣ್ಯ ಅರಸಿನ (ತೀರ್ಥ ಪ್ರಸಾದ) ತಂದ್ ಅಂಗಳಲಿ ಇರುವ ತೊಳ್ಸಿ ಕಟ್ಟೆಲೀ ಇಟ್ಕಂಡವೆ. ಅದೇ ದಿನ ಸಿಹಿ ಊಟಕ್ಕೆ ಬೇಕಾದ ಹುತ್ತರಿಗೆಣ್ಸ್, ಕಾಯಿಪಲ್ಯ, ಸುಂಟಿ ಮುಂತಾದವುಗಳ ಜೋಡಿಸಿಕಂಡವೆ. ಸಂಜೆ ಹೊತ್ತು ನಾನಾ ಬಗೆಯ ತಿಂಡಿ ತಿನಿಸುಗಳ್ನ ತಿಂದ್ ಹೊಟ್ಟೆ ತುಂಬ್ಸಿಕಂಡವೆ.

ಜ್ಯೋತಿಷ್ಯರ್ ಗೊತ್ತು ಮಾಡಿದ ಸಮಯಕ್ಕೆ ಸರಿಯಾಗಿ ನೆರೆ ಕಟ್ಟುವ ಕಾರ್ಯಕ್ರಮನ ಹಮ್ಮಿಕಂಡವೆ. ಹಂಗೇನೇ ನೆಲ್ಲಕ್ಕಿ ಬಾಡೆಲೀ ತೂಗುದೀಪದ ಕೆಳಗೆ ಮುಂದೆನೇ ತೊಳ್ದ್ ಶುಚಿಗೊಳ್ಸಿದ ಚಾಪೆನಾ ಹಾಸಿ ಅದರ ಮೇಲೆ ಮುಕ್ಕಾಲ್ ಮಣೆಗಳ ಮೇಲೆ ಒಂದು ಸೇರ್ ಅಳತೆಯ ಪಾತ್ರೆಲೀ ಬೆಳ್ತಕ್ಕಿ ಒಂದು ಹಾನಿಭತ್ತ, ಎಲ್ಲಾ ಇಟ್ಟ್ ದೀಪ ಉರ್ಸಿ ಇಟ್ಟವೆ. ಮುಕ್ಕಾಲಿಗೆ ಒರ್ಗ್ಸಿ ಬೆಂಕಿಂದ ಕಾಸಿದ ಬೆಳೆಕೊಯ್ಯುವ ಕತ್ತಿ ಒಂದನ್ನ ಇಡೋಕು. ಆ ಮೇಲೆ ನಾನ್ ಮೇಲೆ ಹೇಳಿದ ನೆರೆಕಟ್ಟುವ ಪರಿಕರಗಳ್ನ ಚಾಪೆ ಮೇಲೆ ಇಡೋಕು. ಗೊತ್ತು ಮಾಡಿದ ಸಮಯಕ್ಕೆ ಸರಿಯಾಗಿ ಕುಟುಂಬದ ಹಿರಿಯರ್ (ಪಟ್ಟೆದಾರರ್) ದೇವರ್ನ ಪ್ರಾರ್ಥಿಸಿಕಂಡ್, ದೇವರ ದೀಪಕ್ಕೆ ಅಕ್ಕಿ ಹಾಕಿ ಪೊಲಿದೇವ ಪೊಲಿದೇವಂತ (ಒಲಿದು ಬಾ ತಾಯಿ) ಹೇಳಿಕಂಡ್ ಪರಿಕರದ ಎಲೆಗಳ ಒಂದೊಂದಾಗಿ ತೆಗ್ದ್ ಒಂದರ ಮೇಲೊಂದು ಇಟ್ಟ್ ಸುರುಳಿ ಮಾಡಿ ಅಚ್ಚಿನಾರಿಂದ ಬಿಗಿಯಾಗಿ ಕಟ್ಟಿ ಚಾಪೆಯ ಮೇಲೆ ಇಟ್ಟವೆ. ಹಂಗೇನೇ ಕುಟುಂಬದ ಸದಸ್ಯರ್ ಒಟ್ಟಾಗಿ ಸೇರಿ ಪೊಲಿದೇವ ಪೊಲಿದೇವಂತ ಹೇಳಿಕಂಡ್ ಕುಟುಂಬಕ್ಕೆ ಸಾಕಾಗ್ವಷ್ಟ್ ನೆರೆಗಳ್ನ ಕಟ್ಟುವೆ. ಇದಕ್ಕೆ ಮುಂದೆನೇ ತೀರ್ಥಪ್ರಸಾದನಾ ಮನೆಯ ಎಲ್ಲಾ ಭಾಗಗಳಿಗೆ ಸಿಂಪಡಿಸಿ ಸೇರಿದ ಎಲ್ಲಾ ಜನರೂ ಪ್ರೋಕ್ಷಣೆ ಮಾಡಿಕಂಡ್ ಗಂಧದ ಬೊಟ್ಟು ಹಾಕಿಕಂಡವೆ.

ನೆರೆಕಟ್ಟಿ ಆದ ಮ್ಯಾಲೆ ಸಮಯಕ್ಕೆ ಸರಿಯಾಗಿ ಪೊಲಿದೇವ, ಪೊಲಿದೇವಂತ ಹೇಳಿಕಂಡ್ ದೇವರ ದೀಪಕ್ಕೆ ಅಕ್ಕಿ ಹಾಕಿ ಹಿರಿಯರ ಕಾಲ್ಗಳಿಗೆ ನಮಸ್ಕಾರ ಮಾಡಿ ಮುತ್ತೈದೆಯೊಬ್ಬಳು ತಳಿಯಕ್ಕಿ ಬೆಳಕ್ ತಟ್ಟೆನ ಗೂಡೆ ಒಬ್ಬಳಿಗೆ ಎತ್ತಿಕೊಟ್ಟವೆ. ಹಂಗೇನೇ ಮನೆ ಹಿರಿಯವು ಕದಿರ್ ಕುಯ್ಯುವಂಗೆ ಗುತ್ತಿನ, ಬೆಳೆ ಕೊಯ್ದ ಕತ್ತಿನ ಮತ್ತೆ 2 ನೆರೆಗಳ್ನ ಎತ್ತಿಕೊಟ್ಟವೆ. ಕದಿರು ಕುಯ್ಯುವು ಮೊದಲೇ ಬೆಳಿ ಕುಪ್ಪಸ ಕೆಂಪು ದಟ್ಟಿ, ತಲೆಗೆ ಪೇಟ ಇಟ್ಟ್ ತಯಾರಾಗಿದ್ದವೆ. ಕುಟುಂಬದ ಎಲ್ಲಾ ಸದಸ್ಯರ್ ಪೊಲಿದೇವ, ಪೊಲಿದೇವಾಂತ ಹೇಳಿಕಂಡ್ ಪಟಾಕಿ ಹೊಟ್ಟಿಸಿ ಕಂಡ್ ಬೆಳೆ ಕುಯ್ಯುವ ಗದ್ದೆನ

ಹುಣಿ ಮೇಲೆ ನಿಂತ್ಕಂಡವೆ ಕದಿರು ಕುಯ್ಯವು ಕೊಡಿ ಬಾಳೆಲೆಲೀ ಒಂದು ನೆಣೆ ಉರಿಸಿ ಒಂದಿಷ್ಟ್ ಅಕ್ಕಿ ಹಾಕಿ ಹಸಿ ಹಿಟ್ ಇಟ್ಟ್ ಒಂದು ಭತ್ತದ ನುಲಿಗೆ ಹಾಲ್ ಎರ್‌ದ್ ನೆರೆಕಟ್ಟಿ ದೇವರ್‌ನ್ ಪ್ರಾರ್ಥಿಸ್ಕಂಡ್ 5, 7, 9, 11 ಹಿಂಗೆ ಬೆಸ ಸಂಖ್ಯೆನ ನುಲಿಗಳ್ನ ಕೊಯ್ದುವೆ. ಅಷ್ಪೊತ್ತಿಗೆ ನುಲಿಗೆ ನೆರೆ ಕಟ್ಟಿದ ನೆನಪಿಗಾಗಿ ಒಂದು ಗುಂಡು ಹಾರ್ಸುವೆ. ಹಂಗೆನೇ ಸದಸ್ಯಂಗೆಲ್ಲಾ ಒಂದೊಂದು ಭತ್ತದ ಕಣೆನ ಕೈಲಿ ಹಿಡ್ಕಂಡ್ ಮನೆ ಕಡೆ ಬಂದವೆ. ಮುಂಧೆ ಒಕ್ಕಲು ಕಣಕ್ಕೆ ಹೋಗಿ ಭೇಟಿಗೆ ಮೂರು ಸುತ್ತ್ ಬಂದ್ ಬೇಟಿಗೆ ನೆರೆಕಟ್ಟಿ ಮನೆ ಅಂಗಳಲಿ ನಿಂತ್ಕಂಡವೆ. ಆಗ ಮನೆಲಿದ್ದಾ ಮುತ್ತೈದೆಯೊಬ್ಬಳು ಒಂದ್ ಚೆಂಬುಲಿ ನೀರ್ ತಂದ್ ಮೊದ್ಲು ತಳಿಯಕ್ಕಿ ಬೆಳ್ಕ್ ಹಿಡ್ದ್‌ವಳ ಕಾಲಿಗೆ ನೀರ್ ಹಾಕಿ ಹಂಗೆನೇ ಕದಿರ್‌ಗುತ್ತಿ ಹೊತ್ತ್‌ಕಂಡವರ ಕಾಲಿಗೆ ನೀರ್ ಹಾಕಿ ಕುಡಿಯಕೆ ಹಾಲ ಕೊಟ್ಟವೆ. ಮತ್ತೆ ಮನೆ ಪ್ರವೇಶಿಸ್ವೆ, ಕದಿರುಗುತ್ತಿನ ನೆಲ್ಲಕ್ಕಿ ದೀಪದ ಕೆಳಗೆ ಇಟ್ ಭತ್ತದ ತೆನೆಂದ ಭತ್ತ ತೆಗ್ದ್ ದೀಪಕ್ಕೆ ಹಾಕಿ ನಮಸ್ಕಾರ ಮಾಡ್ವೆ. ಒಂದಿಷ್ಟ್ ಭತ್ತನ ಸುಲ್ದ್ ಅಕ್ಕಿ ಮಾಡಿ ಪಾಯಸಕ್ಕೆ ಹಾಕ್ವೆ. ಆಮೇಲೆ ನೆರೆಯೊಳಗೆ ಕದಿರ್ ಸೇರ್ಸಿ ದೇವರ ದೀಪಕ್ಕೆ ಕಟ್ಟಿ ಅಟ್ಟದ ಏಣಿಗೆ ನೆರೆ ಕಟ್ಟಿಕಂಡ್ ದೇವರ ಮುಡುಪುಗೆ ನೆರೆಕಟ್ಟಿ ಆಮೇಲೆ ಪಾಯಸ ಮಡಿಕೆಗೆ ನೆರೆಕಟ್ಟಿ ಆಮೇಲೆ ಕುಟುಂಬದ ಎಲ್ಲಾ ಸೊತ್ತುಗಳಿಗೆ ನೆರೆಕಟ್ಟವೆ. ನೆರೆಕಟ್ಟಿ ಆದ ಮೇಲೆ ಎಲ್ಲಾ ಸದಸ್ಯರ್ ಒಟ್ಟುಗೂಡಿ ಸಾಮೂಹಿಕವಾಗಿ ಭೋಜನ ಮಾಡ್ವೆ, ಪ್ರಾರಂಭಲಿ ಸಿದ್ಧಪಡಿಸಿ ಇಟ್ಕಂಡ ಹಸಿ ಹಿಟ್‌ನ ಆಲದ ಎಲೆಲೀ, ಊಟದ ಎಲೆಮ್ಯಾಲೆ ಇಟ್ಕಂಡ್ ಬಂದವೆ. ಹಸಿ ಹಿಟ್ (ಪಚ್ಚೆ ಪುಟ್)ಲಿ ಭತ್ತ, ಅಕ್ಕಿ, ಕಲ್ಲುಚೂರು, ಏಲಕ್ಕಿ ಕಾಳು ಮಿಶ್ರ ಇದ್ದೆ. ಊಟ ಮಾಡ್‌ವುಕೆ ಭತ್ತ, ಅಕ್ಕಿ ಸಿಕ್ಕರೆ ಅನ್ನಭಾಗ್ಯ, ಕಲ್ಲು ಚೂರು ಸಿಕ್ಕರೆ ಕಲ್ಲಾಯುಷ್ಯ, ಏಲಕ್ಕಿ ಸಿಕ್ರೆ ಐಭಾಗ್ಯಂತ ಹೇಳ್ದು ಪುರಾಣದ ಕಲ್ಪನೆ. ಊಟ ಎಲ್ಲಾ ಆದ ಮೇಲೆ ಉಳ್ದ ಹಸಿಹಿಟ್‌ನ ಎಲೆಗಳ ಕುಟುಂಬದ ಸದಸ್ಯರು ತೀರಿಕಂಡವರ ನೆನಪುಲಿ ಮನೆ ಬಿಟ್ಟಕೆ ಎಸ್ದ್ ಅಂಟಿಸಿ ಇಟ್ಟವೆ.

ಹುತ್ತರೆ ಹಬ್ಬ ಅಷ್ಟಕೆ ಪೂರ್ತಿ ಆತ್ಲೆ, ಸುಮಾರು 8-10 ದಿನಗಳವರೆಗೆ ಅದರ್ಲೂ ಕೊಡವ ಕುಟುಂಬದವು ಸಮವಸ್ತ್ರ ಧರಿಸಿಕಂಡ್ ಮಂದ್‌ಗಳಲ್ಲಿ (ಜಾನಪದ ನೃತ್ಯದ ಸ್ಥಳ) ಒಟ್ಟಾಗಿ ಸೇರಿ ಕೋಲಾಟ, ಕತ್ತಿಯಾಟ, ಪರಕಳಿ, ಕಪ್ಪೆಯಾಟ ಹಿಂಗೆ ಜಾನಪದ ನೃತ್ಯಗಳ್ನ ದೇವರ ಹೆಸರ್ ಹೇಳಿಕಂಡ್ ಕುಣ್ದು ಕುಪ್ಪಳಿಸುವೆ. ಆಖೈರ್ ದಿನ ಊರ್‌ನ ಜನ ಎಲ್ಲಾ ಸೇರಿ ಊರ್‌ಒರ್ಮೆ (ಊರಿನ ಒಗ್ಗಟ್ಟಿನ ಸಭೆ) ಸಮಾರಂಭಲಿ ಸಾಮೂಹಿಕವಾಗಿ ಹಬ್ಬದ ಊಟ ಮಾಡಿ, ಹುತ್ತರಿ ಹಬ್ಬಕ್ಕೆ ವಿರಾಮ ಹೇಳ್ವೆ.

* * * * *

# ಹರಿಸೇವೆ

ಕಟ್ರತನ ಕೆ. ಬೆಳ್ಯಪ್ಪ.

ಹರಿಯ ಸೇವೆಯೇ ಹರಿಸೇವೆ. ಅರೆಭಾಷೆ ಗೌಡ ಜನಾಂಗದವರ ಕುಲದೇವರೇ ಶ್ರೀ ತಿರುಪತಿ ವೆಂಕಟರಮಣ ದೇವರು. ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಮಠವೇ ಗೌಡ್ರುಗಳ ಗುರುಮಠ. ಗೌಡ ಬಾಂಧವರ ಐನ್‌ಮನೆಗಳ ಅಟ್ಟದ ಈಶಾನ್ಯ ಭಾಗ ಮತ್ತೆ ಪಡುಭಾಗ ಮಧ್ಯಲಿ ದೇವರ ಹೆಸರ‍್ಲಿ ಒಂದಿಷ್ಟ್ ಚಿಲ್ಲರೆ ನಾಣ್ಯಗಳಿಂದ ಕೂಡಿದ ಮುಡಿಪು ಒಂದು ಇದ್ದೆ ಇದ್ದದೆ. ಆ ಮುಡಿಪು ಬೆತ್ತದ ಸಣ್ಣ ಬುಟ್ಟಿ ಅಥವಾ ಮಣ್ಣಿನ ಮಡಿಕೆ ಅಥವಾ ತಾಮ್ರದ ಕರಡಿಗೆಂದ ಕೂಡಿದ್ದದೆ. ಈ ಮುಡಿಪುನ ಉದ್ದೇಶ ಏನ್‌ಂತ ಹೇಳ್ರೆ, ಗೌಡ ಜನಾಂಗದವರ ಮುಖ್ಯ ಜೀವನಾಧಾರವಾಗಿರುವ ಕೃಷಿ ಮತ್ತೆ ಪಶುಪಾಲನೆಗಳಿಂದ ಕೂಡಿರುದರಿಂದ ಅವುಗಳ ಸುಭದ್ರತೆ ಹಂಗೇನೆ ಜನರ ಅಭಿವೃದ್ಧಿ, ಸಂಪತ್ತು, ಸೌಭಾಗ್ಯ ಎಲ್ಲವನ್ನಾ ಕೊಟ್ಟ್ ಶ್ರೀ ವೆಂಕಟರಮಣ ದೇವರು ಕಾಪಾಡೊಕು ಎಂದ ಉದ್ದೇಶಂದ ದೇವರ ಹೆಸರ‍್ಲಿ ದೂಪ ದೀಪ ಹಚ್ಚಿ ಹೊಗೆ ಕೊಟ್ಟ್ ಮುಡಿಪ್‌ನ ಬಿಳಿ ಬಟ್ಟೆಂದ ಭದ್ರವಾಗಿ ಕಟ್ಟಿ ತೂಗ್‌ಹಾಕಿ ಆರಾಧನೆ ಮಾಡ್ವೆ. ಮುಡಿಪು ಇರುವ ಮನೆ ಆಚಾರ ವಿಚಾರಗಳಲ್ಲಿ ತುಂಬಾ ಶುದ್ಧವಾಗಿ ಇರೋಕು. ಗೌಡ ಜನಾಂಗದವು ಮೂರು ವರ್ಷ ಅಥವಾ ಐದು ವರ್ಷಕ್ಕೊಮ್ಮೆ ಅವರವರ ಐನ್‌ಮನೆಗಳಲ್ಲಿ ಹರಿಸೇವೆ ಮಾಡುದು ವಾಡಿಕೆ.

ಹರಿಸೇವೆ ಮಾಡುವ ಕ್ರಮ: ಹರಿಸೇವೆ ಸಾಮಾನ್ಯವಾಗಿ ಶನಿವಾರ ಅಥವಾ ಬುಧವಾರ ನಡ್ಸುದು ವಾಡಿಕೆ. ಆ ದಿನ ದೇವರಿಗೆ ಪ್ರಿಯವಾದ ದಿನ. ಒಂದು ಶನಿವಾರ ಗೊನೆ ಕಡಿದರೆ, ಮುಂದಿನ ಶನಿವಾರ ಹರಿಸೇವೆ ನಡ್ದದೆ. ಆದುದರಿಂದ ಗೊನೆ ಕಡಿಯಕನ ಕುಟುಂಬದ ಹಿರಿಯರ್ ಐನ್‌ಮನೆಲಿ ಸಭೆ ಸೇರಿ ಮುಂಜಾನೆ ಗೊನೆ ಕಡಿಯುವ ಪೂಜಾರಿ ಸ್ನಾನ ಮಾಡಿ ಮೊಡಿ ಉಟ್ಟ್ ದೇವರ ದೀಪ ಹಚ್ಚಿದ ಮೇಲೆ ಮನೆಯ ಪಟ್ಟೆದಾರರ್ ಪ್ರಾರ್ಥನೆ ಮಾಡಿದ ಮೇಲೆ ಪೂಜಾರಿ ಒಟ್ಟಿಗೆ 2–3 ಜನ ಬಾಳೆ ತೋಟಕ್ಕೆ ಹೋಗಿ ಎರಡ್ ಬೆಳ್ದ ಬಾಳೆಗೊನೆಗಳ್ನ ಕಡ್ಕಂಡ್ ಬಂದವೆ. ಕಡ್ಕಂಡ್ ಬಂದ ಗೊನೆಗಳ್ನ ಅಟ್ಟಕ್ಕೆ ಕೊಂಡೋಗಿ ಮುಡಿಪು ಇರುವ ಸ್ಥಳದ ಹತ್ತಿರ ತೂಗುಹಾಕಿ ಧೂಪದ ಹೊಗೆ ಕೊಟ್ಟವೆ. ಹಂಗೇನೇ ಪೂಜಾರಿ ಬೆಳಿಗ್ಗೆ ಮತ್ತೆ ಸಾಯಂಕಾಲ ಗೊನೆಗಳಿಗೆ ಧೂಪದ ಹೊಗೆ ಕೊಟ್ಟವೆ. ಹರಿಸೇವೆ ಮಾಡಿಕೆ ಇನ್ನೇನ್ 5–6 ದಿನ ಉಟ್ಟುಂತ ಹೇಳ್ಕನ ದಾಸಯ್ಯನ ಮನೆಗೆ ಬಾಕೆ ಮಾಡಿ ಮುಡಿಪು ಪೂಜೆ ಮಾಡಿಸಿ, ಮುಡಿಪುಲಿ ಇರುವ ಹಣನ ಬಿಳಿ ಬಟ್ಟೆ ಚೀಲಕ್ಕೆ ಹಾಕಿ ಭದ್ರವಾಗಿ ಕಟ್ಟಿ ಕುಟುಂಬದ ಹಿರಿಯರ್ ತಲೆಮೇಲೆ ಇಟ್ಕಂಡ್ ಅಟ್ಟಂದ ಇಳ್ದ್ ತಿರುಪತಿಗೆ ಹೋಗುವವರ ಕೈಗೆ ಕೊಟ್ಟವೆ. ತಿರುಪಿಗೆ ಹೋದವು ದೇವರಿಗೆ ಅರ್ಪಿಸಿ ಬಂದ ಮೇಲೆ ಹರಿಸೇವೆಗೆ ತಯಾರಾದೆ.

ಹರಿಸೇವೆ ದಿನ ಮುಂದಾಗಿ ದಾಸಯ್ಯನವರ್ನ ಬರಮಾಡೋಕು. ಆ ದಿನ ಕುಟುಂಬದವು ಗೊನೆ ಕಡ್ದ ಬಾಳಿ ದಿಂಡಿನ ರೆಂಬೆಗಳ್ನ ಪೊರ್ಲಾಗಿ ಬುಡ್ಸಿ ಮನೆಗೆ ತಂದವೆ. ಅದರ ಜೊತೆಗೆ ಗುಂಡ ಕಟ್ಟಿಕೆ ಬೇಕಾದ ಕಾರೆ ಮುಳ್ಳುಗಳ ಜೋಡಿಸಿ ಇಡೋಕು. ಮುಂದೆನೇ ಮನೆ ಮುಂದೆ ಚಪ್ಪರ ಹಾಕಿ, ತಳಿರು ತೋರಣಗಳ್‌ಂದ ಶೃಂಗರಿಸಿ ಇಡೋಕು. ಮಡಿವಾಳ ಚಪ್ಪರಕ್ಕೆ ಮೇಲ್ಕಟ್ಟ್ ಕಟ್ಟೋಕು. ಸಾಮಾನ್ಯವಾಗಿ ಕುಟುಂಬಗಳಲ್ಲಿ ಜೋಡು ಗುಂಡಗಳ್ನ ಕಟ್ಟುದು ವಾಡಿಕೆ. ಅದರ ಒಟ್ಟಿಗೆ ಕುಟುಂಬದವು ಯಾರಾದರ್ ಹರಿಕೆ ಹೇಳಿಕಂಡವು ಮತ್ತೆ ದೇವರ ಮೇಲೆ ಪ್ರೀತಿಂದ ಗುಂಡ ಕಟ್ಟ್‌ವವೂ ಇದ್ದವೆ. ದಾಸಯ್ಯ ಬಂದ ಮೇಲೆ ಒಂದು ತಟ್ಟೇಲಿ ಒಂದು ಸೇರ್ ಅಕ್ಕಿ (ಬೆಳ್ತಕ್ಕಿ), ಬಾಳೆಹಣ್ಣ್, ತಾಂಬೂಲ ಕೊಟ್ಟ್ ಗೌರವಿಸಿ ಗುಂಡ ಕಟ್ಟಿಕೆ ಸುರು ಮಾಡಿವೆ. ಜೊತೆಗೆ ಕುಟುಂಬದ ಸದಸ್ಯರೂ ದಾಸಯ್ಯಂಗೆ ಸಹಕರಿಸುವೆ. ಗುಂಡಗ ತಯಾರಾದ ಮೇಲೆ ಹಲಗೆಗಳ ಮೇಲೆ ಚಾಪೆ ಹಾಕಿ ಬಿಳಿ ಬಟ್ಟೆ ಹಾಸಿ ಗುಂಡಗಳ ಸಾಲಾಗಿ ಇರ್ಸಿವೆ.

ಹರಿಸೇವೆ ಮಾಡುವ ದಿನ ಬೆಳಿಗ್ಗೆ ದಾಸಯ್ಯನವು ಗುಂಡಗಳ ಒಳಗೆ ದೀಪಹಚ್ಚಿ, ದೇವರ ಮೂರ್ತಿ, ಹಣ್ಣು ಹಂಪಲು, ಅಕ್ಕಿ, ನಾಣ್ಯಗಳ್ನ ಕೊಡಿ ಬಾಳೆಲೆಲಿ ಇಟ್ಟ್ ಗುಂಡಗಳ್ನ ಹೂ ಮಾಲೆಗಳ್‌ಂದ ಶೃಂಗಾರ ಮಾಡಿ ಬಹಳ ಪೊರ್ಲಾಗಿ ಇಟ್ಟವೆ. ಆ ಮೇಲೆ ಗುಂಡಗಳ ಮೇಲೆ ಕಲಶಪಾತ್ರೆ, ಅದರ ಮೇಲೆ ತೆಂಗಿನಕಾಯಿ ಇಟ್ಟ್ ಹೂಮಾಲೆಗಳ್‌ಂದ ಶೃಂಗರಿಸಿವೆ. ಪೂಜೆಗೆ ಮೊದಲೇ ಭಕ್ತರಿಗೇ ಹಂಗೇನೇ ದಾಸಯ್ಯ ಮತ್ತೆ ದರ್ಶನ ಭಕ್ತರಿಗೆ ಶ್ಯಾಮಿಗೆ ಹಿಟ್ಟ್ (ಇಡ್ಮಣೆ ಹಿಟ್ಟ್) ತೆಂಗಿನ ಹಾಲ್‌ನ ಉಪಹಾರ ಕೊಟ್ಟವೆ. ಅಷ್ಟೋತ್ತಿಗೆ ನೆಂಟರಿಷ್ಟರ್, ಮನೆವು ಎಲ್ಲವೂ ಕಾಫಿ ತಿಂಡಿ ಮಾಡಿ ಮುಗ್ಸಿಕಂಡವೆ. ಆಮೇಲೆ ದಾಸಯ್ಯನವು ಭಕ್ತರಿಗೆ ದರ್ಶನ ಭಕ್ತಂಗೆ ಎಣ್ಣೆ ಕೊಟ್ಟ್ ಸ್ನಾನಕ್ಕೆ ಕಳ್ಸುವೆ. ಹಂಗೇನೇ ಭಕ್ತರ್ ದಾಸಯ್ಯನವು ಸ್ನಾನ ಮಾಡಿ ಬಂದ ಮೇಲೆ ದಾಸಯ್ಯನವು ಭಕ್ತರಿಗೂ, ದರ್ಶನ ಭಕ್ತಂಗೂ ಹಿಂಗಾರದ ಹೂಮಾಲೆಗಳ್ನ ಅವರವರ ಕುತ್ತಿಗೆಗೆ ಹಾಕಿ ಗೌರವಿಸುವೆ. ಆಮೇಲೆ ದಾಸಯ್ಯನವು ಗುಂಡಗಳ ಎದುರು ಕೊಡಿ ಬಾಳೆಲೆಗಳಲ್ಲಿ ಪಂಚಕಜ್ಜಾಯ, ಅವಲಕ್ಕಿ ಹೊದುರಿಗಳ್‌ಂದ ಮಾಡ್ದ ಪ್ರಸಾದ, ನಾನಾ ಬಗೆಯ ಹೂಗಳ ಮತ್ತೆ ಹಣ್ಣ್‌ಗಳ್ನ ಮತ್ತೆ ಬೇಟೆ ಸೊಪ್ಪುನ ಗೊನೆಗಳ್ನ ಇಟ್ಟವೆ. ಆಮೇಲೆ ಪಾನಕ ಪೂಜೆ ಆದೆ. ನಂತರ ಕುಟುಂಬದ ಎಲ್ಲಾ ಸದಸ್ಯರ್ ಗುಂಡಗಳ ಎದುರು ನಿತ್ಕಂಡ ಮೇಲೆ, ಪಟ್ಟೆದಾರರ್ ಪ್ರಾರ್ಥನೆ ಮಾಡಿದ ಮೇಲೆ ದಾಸಯ್ಯನೂ ಒಂದೆರಡ್ ಮಾತ್ ಹೇಳಿಕಂಡ ಮೇಲೆ ಪೂಜೆಗೆ ಸುರು ಮಾಡ್ವೆ. ಆಗ ದರ್ಶನ ಭಕ್ತಂಗೆ ದೇವರು ಮೈಮೇಲೆ ಬಂದದೆ. ದಾಸಯ್ಯನವು ದೊಡ್ಡ ಪೂಜೆಗೆ ಶುರು ಮಾಡಿಕೆ ಮೊದಲು ಮನೆಯ ಅಟ್ಟಲಿದ್ದ ಮುಡಿಪುಗೆ ಪೂಜೆ ಮಾಡಿ, ಮುಡಿಪುನ ಪಟ್ಟೆದಾರರ ತಲೆ ಮೇಲೆ ಇಟ್ಕಂಡ್ ಬಂದ ಗುಂಡದ ಎದುರು ಮಡಿ ಹಾಸಿದ ಬಟ್ಟೆ ಮೇಲೆ ಇಟ್ಟವೆ. ಆಮೇಲೆ ಪೂಜೆಗೆ ಸುರು ಮಾಡುವೆ. ಆಗ ದರ್ಶನ ಭಕ್ತಂಗೆ ಮೈಮೇಲೆ ದೇವರು ಬಂದ್ ಕುಟುಂಬದವುಕೆ ಆಶೀರ್ವಾದ ಮಾಡಿವೆ. ಹಂಗೇನೇ ಕುಟುಂಬಂದ ಮದುವೆ ಆಗಿಹೋದ ಹೆಣಕ್ಕಳಿಗೂ ಆಶೀರ್ವಾದ ಮಾಡ್ವೆ. ಆಮೇಲೆ

ಭಂಡಾರಕ್ಕೆ ಹಣ ಹಾಕ್ವೆ, ಎಲ್ಲವುಕೂ ಪ್ರಸಾದ, ಪಾನಕ ಹಂಚಿವೆ. ಭಂಡಾರಕ್ಕೆ ಬಿದ್ದ ಹೆಚ್ಚಿನಾಂಶ ಹಣನ ಬ್ಯಾಂಕ್ ಮೂಲಕ ಅಥವಾ ತಿರುಪತಿಗೆ ಹೋಗುವವರ ಕೈಲಿ ಕೊಟ್ಟ್‌ಕಳ್ಸಿವೆ. ಉಳಿದ ಅಲ್ಪ ಸ್ವಲ್ಪ ಹಣನ ಮುಡಿಪುಗೆ ತುಂಬಿಸಿ, ಮುಡಿಪು ಪೂಜೆ ಮಾಡಿ ಆರತಿಯೊಂದಿಗೆ ಕುಟುಂಬದ ಪಟ್ಟೆದಾರರ ತಲೆಮೇಲೆ ಇಟ್ಕಂಡ್ ಒಡ್ಡೋಲಗದ ಒಟ್ಟಿಗೆ ಐನ್ ಮನೆಯ ಅಟ್ಟಕ್ಕೆ ಹೋಗಿ ಮುಡಿಪು ಕಟ್ಟುವ ಸ್ಥಳಲಿ ಕಟ್ಟಿ ಧೂಪ ದೀಪ ಹಚ್ಚಿ ವಾಪಾಸ್ಸಾದೆ. ಅನಂತರ ಸಾರ್ವಜನಿಕರ್ ಮಧ್ಯಾಹ್ನದ ಭೋಜನ ಸ್ವೀಕರ್ಸಿಕಂಡವೆ.

ಭೋಜನದ ನಂತರ ಗುಂಡಗಳ್‌ಂದ ಸ್ವಲ್ಪ ದೂರಲಿ, ಗುಂಡಗಳಿಗೆ ತೆರೆಮರೆ ಕಟ್ಟಿ ಶ್ರೀ ತಿರುಪತಿ ತಿಮ್ಮಪ್ಪನ ಧೂತನಾದ ಕೆಂಚಿರಾಯಂಗೆ ಮಂಡಲ ಬರೆದ್ ಎಡೆ ಇಕ್ಕಿ ಬೇಟೆ ಸೊಪ್ಪುನ ಇಟ್ಟ್ ಪೂಜೆ ಮಾಡಿ ಆದ ಮೇಲೆ ಕೋಳಿ ಕುಯ್ದಿದ್, ಆಮೇಲೆ ಆಡ್‌ನ ತಲೆಕಡ್ಡ್ ಕೆಂಚಿರಾಯಂಗೆ ರಕ್ತದ ಆಹಾರ ಅರ್ಪಿಸಿವೆ. ಆ ಸಂದರ್ಭಲಿ ದರ್ಶನ ಭಕ್ತನ ಒಂದು ಕಡೆ ಮನೆಯೊಳಗೆ ಗೋಪ್ಯವಾಗಿ ನಿಲ್ಲಿಸಿದ್ದವೆ. ಯಾಕೆಂತ ಹೇಳ್ರೆ ದರ್ಶನ ಭಕ್ತಂಗೆ ಗೊತ್ತಾದರೆ, ಅಂವ ರಕ್ತನ ಕುಡ್ದ್ ಬುಟ್ಟದೆ. ಆಮೇಲೆ ಭೋಜನಕ್ಕೆ ಮಾಂಸದ ಊಟ ಸಿದ್ಧಪಡ್ಸುವೆ. ಊಟಕ್ಕೆ ತಯಾರಾದ ಮೇಲೆ ಮುಂದೇನೇ ಗುರುಕಾರೋಣರಿಗೆ ಎಡೆ ಇಕ್ಕಿ ಪ್ರಾರ್ಥನೆ ಮಾಡಿಕಂಡವೆ. ಆಮೇಲೆ ಭಕ್ತರಿಗೂ, ದಾಸಯ್ಯನವ್ಕೂ ಊಟ ಬಡ್ಸುವೆ. ಮತ್ತೊಂದು ಕಡೆ ಊರೋವು, ನೆಂಟರ್, ಮನೆವು ಎಲ್ಲವೂ ಭೋಜನ ಸ್ವೀಕರ್ಸುವೆ. ಆಮೇಲೆ ಗುಂಡ ಪೂಜೆ ಮಾಡಿ, ಗುಂಡಗಳ್ನ ಭಕ್ತರ್ ಒಡ್ಡೋಲಗದ ಒಟ್ಟಿಗೆ ಹೊತ್ತಂಎ ಹೋಗಿ ಹಾಲ್‌ಬರುವ ಮರದ (ಹಲ್ಸ್‌ನಮರ) ಬುಡಲಿ ಇಟ್ಟವೆ. ಅಲ್ಲಿಗೆ ಹರಿಸೇವೆ ಮುಕ್ತಾಯ ಆತ್.

ಹಿಂದೆನ ಕಾಲಲಿ ಹರಿಸೇವೆ ಉತ್ಸವಲಿ ಪೂಜೆ ಆಕಾಕನ ಹೆಣ್ಮಕ್ಕ ದೇವರ ಹೆಸರ್ಲಿ ಸೋಬಾನೆ ಹಾಡ್ತಿದ್ದೊ. ಈಗ ಅದೆಲ್ಲಾ ಮಾಯ ಆಗುಟ್ಟು. ನಾನ್ ಇಲ್ಲಿ ಒಂದು ನಾಲ್ಕ್ ಗೆರೆ ಶ್ರೀ ವೆಂಕಟರಮಣ ದೇವರ ಹಾಡ್ನ ಬರ್‍ದೊಳೆ.

ಸಣ್ಣ ಸಣ್ಣ ನಾಮ ಸಣ್ಣ ನೀಯಲಿ ನಾಮ ।
ಎಷ್ಟೊಂದು ನಾಮ ಹರಿನಾಮ।
ಎಷ್ಟೊಂದು ನಾಮ ಹರಿನಾಮ ವೆಂಕಟರಮಣ।
ಎಲ್ಲಾ ದೇವರಿಗೆ ಎಣ್ಣೆಯಲಿ ದೀವಿಗೆ।
ಎಲ್ಲಾ ದೇವರಿಗೆ ಎಣ್ಣೆಯಲಿ ದೀವಿಗೆ।
ನಮ್ಮ ಒಡೆಯ ತಿಮ್ಮಪ್ಪಗೆ ತುಪ್ಪದಲಿ ದೀವಿಗೆ॥
ಸಣ್ಣ ಸಣ್ಣ ನಾಮ ಸಣ್ಣ ನೀಯಲಿ ನಾಮ।
ಎಷ್ಟೊಂದು ನಾಮ ಹರಿನಾಮ ॥
"ಶ್ರೀ ತಿರುಪತಿ ತಿಮ್ಮಪ್ಪಂಗೆ ಗೋವಿಂದ" "ಶ್ರೀ ತಿರುಪತಿ ತಿಮ್ಮಪ್ಪಂಗೆ ಗೋವಿಂದ"

* * * * *

ಕತೆಗ :

# ಬದ್ಕ್‌ನ ಬದ್ಕೊಳಗೆ

– ಬಿಟ್ಟೀರ ಶ್ರುತಿ ಬೆಳ್ಯಪ್ಪ

ಕಗ್ಗತ್ತಲೆಲಿ ಯೋಚಿಸಿಕಂಡ್ ಕುದ್ದಿದ್ದೆ. ಈ 'ಸ್ನೇಹ'ತ ಹೇಳ್ರೆ ಎಂತ? ಈ 'ಪ್ರೀತಿ'ತ ಹೇಳ್ರೆ ಎಂತ?ತ. ಒಬ್ಬರ್‍ನೊಬ್ಬ ಅರ್ಥ ಮಾಡಿಕಂಡ್ ಜೀವನ ನಡ್ಸಿಕಂಡ್ ಹೋದ. 'ಪ್ರೀತಿ' ಮತ್ತೆ 'ಸ್ನೇಹ'ತ ನಾವೆಲ್ಲಾ ಗ್ಯಾನ ಮಾಡಿಕಂಡವೆ. ಆದ್ರೆ ಎರಡ್ ಜನರ ಮಧ್ಯ ಮೂರನೆಯವ ಬಂದ್ ಮಧ್ಯಸ್ಥಿಕೆ ವಹಿಸ್‌ಕಾನ ಆ ಪ್ರೀತಿ– ಸ್ನೇಹ ಎಲ್ಲಾ ಮುರ್ದ್ ಹೋದೆ.

ಪ್ರೀತಿ– ಸ್ನೇಹತ ಹೇಳ್ದು ಒಂದ್ ಹಕ್ಕಿಯ ಎರ್ಡ್ ರೆಕ್ಕೆಗಳಿದ್ದಂಗೆತ ನಾವ್ ತಿಳ್ಕಂಡವೆ. ಆದ್ರೆ, ಎರಡ್ ರೆಕ್ಕೆಗ ಇಲ್ಲದೆ, ಆ ಪಕ್ಕಿ ಬದ್ಕಿಕೆ ಆಗದ ಸ್ಥಿತಿಯಂಗಿದ್ದದೆ. ಅದೇ ಆ ಸ್ಥಿತಿ ಮನ್‌ಸಂಗೆ ಬಂದರೆ ಅವಂಗೂ ಹಂಗೆ ಆಗೋ ಸ್ಥಿತಿಗ ಬಂದೆ. ಭೂತಲ್ಲಿದ್ದ ನೆನಪ್‌ಗ ಎಲ್ಲಾ ಭೂತ ಆಗಿ ಕಾಡ್‌ಕಾಕಾನ ಬ್ಯಾನೆ ಆದೆ. ನರಳ್ವೆ, ಮರ್‌ಟ್ವೆ ಆದ್‌ರೂ ಬದ್ಕ್‌ವೆ. ಅದ್ ಯಾರಿಗಾಗಿ ಇನ್ಯಾರಿಗೋ ಖುಷಿಯಾದರೆ ತಾ..

ಎಂತನೂ ಪಡ್ಕಂಡದೆ ಹುಟ್ಟಿದ ಮನ್ಸ್ ಎಂತನೂ ತಕಂಡ್ ಹೋಗದೆನೆ ಸತ್ತ್ ಸ್ವರ್ಗ ಸೇರ್ದೆ. ಆದ್ರೆ, ಬದ್ಕ್‌ನ ದಾರಿ ಮಾತ್ರ ಕಂಡ್ಕಳ್ದು ತಿಳ್ಕಂಡಷ್ಟ್ ಸುಲ್ಭದ ಕೆಲ್ಸ ಆಗಿರ್ದುಲೆ. ಏನೋ ಗ್ಯಾನ ಮಾಡ್ಕಂಡ್ ಇದ್ದವೆ. ಇನ್ನೇನೋ ಆಗಿ ಹೋದೆ. ಆದ್ರೂ ಇದ್ನ ಹೆಚ್ಚ್ ಗ್ಯಾನ ಮಾಡ್ರೆ ಯಾಕೆ ಹಿಂಗೆತ ಪ್ರಶ್ನೆ ಮತ್ತೆ– ಮತ್ತೆ ಬಂದ್ ತೇಲಿ ಹೋದೆ. ಅದ್ಕೆ ಕೊನೆಗೆ ಮನ್ಸ್ ತಾನೇ ತೀರ್ಮಾನಿಸಿಕಂಡದೆ. ಇದೆಲ್ಲಾ 'ವಿಧಿ–ಬರಹ'ತ

ಹಿಂಗೆ 'ಪಾಲಿಗೆ ಬಂದದ್ ಪಂಚಾಮೃತ'ತ ಒಪ್ಪಿಕಂಡವೆ. ಆದ್ರೆ ಈ ತರದ ಕಾನೂನು ಎಲ್ಲದಕೂ ಆಲೆ. ಹುತ್ತನ ನೋಡಿ ಅದರ್‍ಲಿ ಹಾವಿರ್ದುಲೆತ ಕೈ ಹಾಕ್‌ಕಾಕನ ಅವನ ನಂಬಿಕೆನೆ ಮೋಸ ಮಾಡಿದ್ದದೆ. ಅವ ಮೋಸ ಹೋದೆ.

ಅಯ್ಯೋ!! ನಾ ಹೇಳಿಕ್ಕಿದ್ದ ವಿಷಯನೇ ಮರ್‍ತೋದೆಲ, ಪ್ರೀತಿ– ಸ್ನೇಹದ ಬಗ್ಗೆ. ಮನ್ಸ್‌ಲಿರೋ ಲಹರಿನೇ ತೆರ್ದ್ ಇಡ್ತಿದ್ದೆ ಅಲಾ! ಇಲ್ಲಿ ಎಲ್ಲನೂ ಇಷ್ಟೇ, ಗೋಜೆಲ್– ಗೋಜೆಲ್ ಯಾವುದೂ ಕೂ ಊಹೆಗೆ ಸಿಕ್ಕುಲೆ ಊಹಾಪೋಹಿತವಾಗಿದ್ದದೆ. ಯಾವುದು ಕೂಡ ಯಾವುದನ್ನ ನಂಬಿ ಬದ್ಕಿರ್ದುಲೆ. ಮನ್ಸ್ ಎಂತ ಬೇಕ್‌ತ ನಿರ್ಧರ್‍ಸಿಕಂಡದೆ. ಸಿಕ್ಕದಿರ್ಕನ ಈ ಬದ್‌ಕ್ ನಶ್ವರವಾದಂಗೆ ಆದೆ. ಆದ್ರೆ ಅದರ ಆಕಡೆ ಪುಟ ತೆರಿಯಕನಾ ಯಾವುದು ಇಲ್ಲದೆ ಇನ್ನೊಂದು ಬದ್ಕಿದ್ದದೆ. ಹಿಂಗೆ ನಾವಂದ್‌ಕೊಂಡದ್ದ್ ಸಾಧ್‌ಸೋ ಶಕ್ತಿ ಇದ್ದದೆ. ಸಾಧ್‌ಸುವೆತಾ ಮನ್ಸ್‌ಲಿ ದೃಢ ಸಂಕಲ್ಪ ತೊಟ್ಟ್ ಛಲ ಹುಟ್ಟ್‌ಕನ ದೇಹಲಿ ಏನೋ ಒಂತರ ಹುರ್‌ಪು ಮುಟಿದೆದ್ದದೆ. ಆಗ ಮನ್ಸ್ ಕೂಡ ಜಯದ ಮೆಟ್ಟಿಲೇರಿದ್ದದೆ. ಆದ್ರೆ ಆ ಮುಗ್ಧ ಮನ್ಸ್‌ನ ಪರಿವರ್ತಿಸಿಕೆ ಹೊರ್ಟ ಇನ್ನೊಂದು ಮನ್ಸ್‌ಗೆ ವಂದುನ್ದನ್ನ ಮರ್ತ್ ಹೋಗಿದ್ದದೆ. ಆ ಯಾವುದೂ ಬೇಡತ ಕೈ ಚೆಲ್ಲಿ ಕುದ್ದಿದ್ದ ಮನ್‌ಸ್‌ಗೆ ಹರ್ಷ ಕೊಟ್ಟ್ ಮುಂದ್ ಬರ್‌ಸಿದ ಆ ಮನ್‌ಸೇ ಶ್ರೇಷ್ಠ ಅಲಾ! ಆದ್ರೆ ಅದ್ನ ಮರಿಯಕಾದ್. ಆ ಮನಸ್‌ಗೆ ಯಾಗೋಳು ಚಿರಋಣಿಯಾಗಿರೋಕು.

# ವಿಪರ್ಯಾಸ

- ಕಟ್ರತನ ಲಲಿತಾ ಅಯ್ಯಣ್ಣ

ನಿನ್ನೆವರೆಗೆ ಪಾದರಸನಂಗೆ ಚುರುಕಾಗಿ ಓಡಾಡಿಕೊಂಡಿದ್ದ ಸೋಮಯ್ಯನವು ಇಂದ್ ನೆರೆಕರೆಯವುಕೊಂದು ಒಗಟಾಗಿದ್ದೊ. ಶ್ರೀಮಂತರಾಗಿದ್ದ ಅವು ವಯಸ್ಸ್ ಅರ್ವತ್ ಆಗಿದ್ದರೂ ಎಂದು ಸೋಮರಿಯಾಗಿ ಕುದ್ದವೇ ಅಲ್ಲ. ಬೆಳ್ಗಿನ ಜಾವಕ್ಕೆ ಎದ್ದು ತಮ್ಮ ದಿನಚರಿಯಲ್ಲಿ ತೊಡಗುತಿದ್ದೊ. ಇಂದ್ ಅವು ಮಂಕಾಗಿರ್‌ದಕ್ಕೆ ಕಾರಣ ಇಲ್ಲದೆ ಇತ್ಲೆ. ತಮ್ಮ ಸೊಸೆನ ಸ್ಥಿತಿ ಚಿಂತಾಜನಕವಾಗುಟ್ಟುತ ಮಂಜಂದ ರಾತ್ರಿ ತಾನೆ ಬಂದ ಫೋನ್ ಅವ್ರ ದುಃಖಕ್ಕೆ ಕಾರಣ ಆಗಿತ್ತ್.

* * * * *

ಇಪ್ಪತ್ತೈದು ವಯಸ್ಸಿಗೆ ಮೆಚ್ಚಿದವಳೊಟ್ಟಿಗೆ ಮದುವೆ ಆಗಿದ್ದ ಅವು ಸುಖದ ಸುಪ್ಪತಿಗೆಲಿ ತೇಲಾಡ್‌ಕಂಡ್ ಇರ್ಕನೆ 10 ವರ್ಷದ ಮಂಜ ಅನಂತನ ಅವ್ಕೆ ಒಪ್ಪಿಸಿ ಸೀತಮ್ಮ ವೆಂಕಟರಮಣನ ಪಾದ ಸೇರ್ಕಂಡಿದ್ದೊ. ಅಂದ್‌ಂದ ಅಪ್ಪ ಅವ್ವ ಎಡ್ಲೂ ಆಗಿ ಅಂಗೈಲಿ ಇಟ್‌ಕಂಡ್ ಮಂಜನ ಬೆಳ್ಸಿದ್ದೊ. ತಮ್ಮ ಜೀವಕ್ಕೆ ಜೀವ ಆಗಿದ್ದ ಸೀತನ ಜಾಗಕ್ಕೆ ಯಾರ್‍ನಸ ತಾಕೆ ಹಾಂಗೇ ಮಂಜಂಗೆ ಚಿಕ್ಕವ್ವನ ತಾಕೆ ಇಷ್ಟ ಇಲ್ಲದೆ ವಿಧುರ ಆಗಿಯೆ ಇದ್ದೊ ಅವು. ಅನಂತ ಬೆಂಗ್ಳೂರ್‌ಲಿ ಹಾಸ್ಟೆಲ್‌ಲಿ ಇದ್‌ಕಂಡ್ ಓದ್‌ತಿತ್ತ್. ಬುದ್ಧಿವಂತನಾದ ಮಂಜ ಬ್ಯಾರೆ ಮಕ್ಕಳಂಗೆ ಆಗದೆ ಲಾಯ್ಕ್ ಓದಿ ಬಾಳ್‌ಲಿ ಮುಂದೆ ಬರಕುತೇಳಿ ಹಳ್ಳಿಯ ವಾತಾವರಣಂದ ದೂರ ಇಟ್ಟ್ ಸೋಮಯ್ಯನವು ಮಂಜನ ಓದಿಸ್ತಿದ್ದೊ. ಅಪ್ಪನ ಆಸೆನಂಗೆ ಅನಂತನು ಯಾವುದೇ ಕ್ಲಾಸ್ಲ ಮುಗ್ಗರಿಸದೆ ಲಾಯ್ಕ ಓದಿ ಮುಗ್ಸಿತ್ತ್.

ಆದರೆ ಒಟ್ಟಿಗೆ ತನ್ನ ಬಾಳ ಸಂಗಾತಿನೂ ಆರ್ಸಿಕಂಡಿತ್ತ್. ಇದ್ರಂದ ಸೋಮಯ್ಯನವುಕೆ ಬಾಳ ನಿರಾಶೆಯಾಗಿತ್ತ್. ಸಣ್ಣದ್ರಂದೇ ತಮ್ಮ ವಿಧವೆ ತಂಗ್ಯೆನ ಮಗ್ಳ್ ರಾಧಿಕನೊಟ್ಟಿಗೆ ಮದುವೆ ಮಾಡ್ದುತ ಹಿರಿಯವೆ ತೀರ್ಮಾನ ಮಾಡಿದ್ದೊ.

ಆದರೆ ಕಷ್ಟಪಟ್ ಹತ್ತನೆ ಕ್ಲಾಸ್ ಪಾಸು ಮಾಡಿಕೆ ಆಗದ ರಾಧಿಕನ ಬುದ್ಧಿಮಟ್ಟ ಮತ್ತೆ ತನ್ನ ಬುದ್ಧಿಮಟ್ಟಕಿರ್‌ವ ಒಂದು ಅಂತರ ಅನಂತನ ರಾಧಿಕಂದ ದೂರ ಮಾಡಿತ್ತ್. ಹಂಗೆ ಅಂವ ತನ್ನ ಕಾಲೇಜ್ ಗೆಳತಿ ನಳಿನಿಯೊಟ್ಟಿಗೆ ಮದುವೆ ಆಗಿತ್ತ್.

ಇಂದಿನ ಕಾಲದ ಹಂಗೆ ಮಂಜನ ಆಸೆಗೆ ಸಂತೋಷಕ್ಕೆ ಅಡ್ಡಿ ಮಾಡದೇ ಸೋಮಯ್ಯನವು ಒಪ್ಪಿಗೆ ಕೊಟ್ಟರೂ ರಾಧಿಕ ಅವ್ರ ಮನ್ಸ್‌ಲೇ ಉಳ್ದ್ ಬಿಟ್ಟಿತ್ತ್.

ಅನಂತ ಮತ್ತು ನಳಿನಿನವು ಹಳ್ಳಿನ ನಿಸರ್ಗದ ಸವಿನ ಅಲೆದಲೆದು ಸವಿದೊ. ಪಟ್ಟಣದ ವಾತಾವರಣಲಿ ಬೆಳ್ದಿದ್ದ ನಳಿನಿಗೆ ಹಳ್ಳಿನ ಪೊರ್ಲು ಹುಚ್ಚ್ ಹಿಡ್ಸವಂಗೆ ಇತ್ತ್. ಬರ್‍ತಾ ಬರ್‍ತಾ ದಿನ ಕಳ್ದಂದೆ ನಳಿನಿ ಸೋಮಯ್ಯನವರ ಮನ್‌ಸ್‌ನ ಗೆದ್ದಿತ್ತ್. ಅವರ ಅಸಮಾಧಾನ ದೂರವಾಗಿತ್ತ್. ಸೋಮಯ್ಯನವು ಅವ್ಳನ ಮಗಳಾಂಗೆ ಆಧರಿಸ್ತಿದ್ದೊ. ತಮಗೆ ಸಂಗಾತಿಯಾಗಿ ಮೊಮ್ಮಂಜ ಶ್ಯಾಂ ಬಾಕನ ಅವರ ಖುಸಿಗೆ ಪಾರವೇ ಇತ್ಲೆ. ಕೂಸ್‌ನೊಟ್ಟಿಗೆ ಅವು ಕೂಸಾಗಿ ತಮ್ಮ ಎಲ್ಲಾ ಬ್ಯಾನೆಗಳ್ನ ಮರ್‍ತೊ.

ಎರ್ಡನೇ ಕೂಸ್‌ನ ಹೆರಿಕೆ ತವರಿಗೆ ಹೋಗಿದ್ದ ನಳಿನಿನ ಸ್ಥಿತಿ ಚಿಂತಾಜನಕವಾಗುಟ್ಟು ಕೇಳಿ ಸೋಮಯ್ಯನವು ಆಕಾಶವೇ ಕಳ್ಚಿ ಬಿದ್ದಂಗೆ ಕುಸ್ತು ಹೋದೊ.

* * * * *

ಮಂಜ ಸೊಸೆ ಮತ್ತೆ ಹೊಸ ಕೂಸ್‌ನ ಪಾರ ಕಾಯತ್ತಿದ್ದ್ ಸೋಮಯ್ಯನವು ಹೆಣ್ಣ್ ಮತ್ತೆ ಕೂಸ್‌ನ ಕಳ್ಕಂಡ್ ಶ್ಯಾಂನೊಟ್ಟಿಗೆ ಬಂದ ಅನಂತನ ನೋಡಿ ಸಣ್ಣ ಮಕ್ಕಳಂಗೆ ಮರ್‍ಗ್‌ಬುಟ್ಟೊ. ಅನಂತು ಹುಚ್ಚನಂಗೆ ಆಗಿ ಹೋಗಿತ್ತ್. ಶ್ಯಾಂನ ನೋಡಿಕಂಬವೇ ಇಲ್ಲವಾಗಿದ್ದೊ.

ಇದೇ ಸಮೆಲಿ ಸೋಮಯ್ಯನವರ ತಂಗಿ ಮತ್ತೆ ರಾಧಿಕ ಬಂದಿಳ್ದೊ. ದಿನ ಕಳ್ದಂಗೆ ಮನೆನ ಎಲ್ಲಾ ಜವಾಬ್ದಾರಿನೂ ತಕಂಡೊ. ಹೆಣ್ಣ್ ದಿಕ್ಕ್ ಇಲ್ಲದ ಮನೆಲಿ ಇವರ ರಾಜ್ಯಭಾರ ಸುರು ಆತ್.

ರಾಧಿಕ ಶ್ಯಾಂನ ಬಾಳಾ ಕುಶಿಲಿ ಪ್ರೀತಿಂದ ನೋಡಿಕಂಡಂಗೆ ನಾಟಕ ಮಾಡ್ತಿತ್ತ್. ಇದ್ರಿಂದ ಸೋಮಯ್ಯನವ್ಕೆ ಬಹಳ ಕುಶಿ ಆತ್. ಅವ್ರ ಮನ್ಸ್‌ಲಿ ಮಧುರವಾದ ಭಾವನೆಯೊಂದ್ ಸುಳಿದಾಡ್ತಿತ್ತ್.

ರಾಧಿಕಾನ ಮನ್‌ಸ್‌ಲಿ ಅನಂತನ ಕಡೆ ಮುರುಟಿ ಹೋಗಿದ್ದ ಕನಸ್‌ನ ಬಳ್ಳಿ ಚಿಗುರಿಕೆ ಶುರು ಆಗಿತ್ತ್. ಅವ್ಳು ಅನಂತನ ತನ್ನ ಕಡೆಗೆ ಸೆಳಿಯಕೆ ಪ್ರಯತ್ನ ಮಾಡ್ತಾ

ಇತ್ತ್. ಆದರೆ ಅನಂತ ಮಾತ್ರ ಸ್ಥಿತಿ ಪ್ರಜ್ಞನಂಗೆ ಇತ್ತ್.

ಸೋಮಯ್ಯನವು ದಿನಂದ ದಿನಕ್ಕೆ ರಾಧಿಕಂಗೆ ಬಾಳ ಹೊಂದಿಕೊಂಡೊ. ಬರ್ತಾ ಬರ್ತಾ ಅನಂತಂಗೂ ರಾಧಿಕ ತನಿಗೆ ಮತ್ತೆ ಶ್ಯಾಂಗೆ ಮಾಡ್ತಿದ್ದ ಆರೈಕೆಗೆ ಕಣ್ಣಿಗೆ ಕಾಂಬಕ್ಕೆ ಸುರು ಆತ್.

ಸೋಮಯ್ಯನವು ಮಂಜಗಾಗಿಯಾದ್ರೂ ರಾಧಿಕಾನ ಮದ್ವೆ ಆಗುತ ಅನಂತಂಗೆ ಒತ್ತಾಯ ಮಾಡ್ತಿದ್ದೊ. ಅನಂತು ಸ್ಪಷ್ಟವಾಗಿ ತನ್ನ ನಿರ್ಧಾರ ತಿಳಿಸದೇ ನಿಮ್ಮಿಷ್ಟತೇಳ್ತ್. ಅಷ್ಟೇ ಸಾಕ್‌ತ ಕಾದಿದ್ದ ಅಪ್ಪ ತಂಗೆನೊಟ್ಟಿಗೆ ಮದ್ವೆ ವಿಷ್ಯ ಮಾತಾಡ್ದೊ.

ಅಣ್ಣನ ಆಸ್ತಿನ ಮ್ಯಾಲೆ ಕಣ್ಣ್ ಮಡ್ಗಿದ್ದ ತಂಗೆ ಜಾನಕಿ ಕುಸಿಲೇ ಒಪ್ಪಿಕಂಡತ್.

* * * * *

ಮದ್ವೆ ಆದ ಮ್ಯಾಲೆ ರಾಧಿಕಾನ ನಿಜರೂಪ ಬಯಲಾಕೆ ಸುರು ಆತ್. ಶ್ಯಾಂ ಮ್ಯಾಲೆ ಇದ್ದ ಕೃತಕ ಪ್ರೀತಿ ಕಮ್ಮಿಯಾತ್. ಅವ್ಳಿಗೆ ತಾನು ತನ್ನ ಗಂಡ, ಮನೆ ಇಷ್ಟೆ ಇರಕೂತ ಬಾಳ ಆಸೆ ಇತ್ತ್. ಶ್ಯಾಂ ತುಂಟಾಟ ಅವ್ಳ ಕೈಲಿ ಸಹಿಸಿಕೆ ಆಗ್ತಿತ್ಲೆ.

ಅನಂತ ಆಸ್ತಿನ ಜವಾಬ್ದಾರಿ ವಹಿಸಿಕಂಡ ಮ್ಯಾಲೆ ಅಂವ ತೋಟ ಗದ್ದೆತ ಜಾಸ್ತಿ ಹೊರಗೆ ಕಳಿಯತಿತ್ತ್. ಅದಲ್ಲದೇ ಅಂವಂಗೆ ಮನೆ ವಿಚಾರಲಿ ಮುಂದೆನ ಆಸಕ್ತಿ ಇತ್ತ್‌ಲೆ.

ಒಂದೆರ್ಡ್ ವರ್ಷ ಕಳಿಯಕನ ತನಿಗೆ ಒಂದು ಕೂಸು ಆಕನ ರಾಧಿಕಂಗೆ ಶ್ಯಾಂನ ಮ್ಯಾಲೆ ಇದ್ದ ಅಲ್ಪ ಸ್ವಲ್ಪ ಪ್ರೀತಿ ಸಹ ಇಲ್ಲದಾತ್. ಮನೆನ ಪೂರ್ತಿ ಜವಾಬ್ದಾರಿ ಅವಳೇ ತಕಂಡ್‌ಬುಡ್ತ್. ಅವ್ಳೀಗ ಮನೇಲಿ ಮಹರಾಣಿನಂಗೆ ಮೆರಿತ್ತಿತ್ತ್.

ಸೋಮಯ್ಯನವು ಮೂಕರಾಗಿ ಬ್ಯಾನೆ ಪಡ್ತಿದ್ದೊ. ತಾವಾಗಿ ತಂದ್‌ಕಂಡ ಗಂಡಾಂತರ ಇದ್ ಆಗಿತ್ತ್. ತಾವಾಗಲೀ ಅನಂತು ಆಗಲೀ ಏನಾರೆ ಮಾತಾಡ್ರೆ ಮನೇಲಿ ಕುರುಕ್ಷೇತ್ರ ನಡಿತಿತ್ತ್.

ಶ್ಯಾಂಮಂಗೆ ಈಗ ಹನ್ನೆರಡ್ ವರ್ಷ, ಅರುಣಂಗೆ ಆರು ವರ್ಷ ಆಗಿತ್ತ್. ಅರುಣಂಗೆ ಶ್ಯಾಮಣ್ಣತೇಳ್ರೆ ಬಹಳ ಇಷ್ಟ. ಅವಂಗೆ ಅಂವ ಒಂದು ನಿಧಿ ಆಗಿತ್ತ್. ತನ್ನ ಸಮಯನೆಲ್ಲಾ ಅಂವ ಅಣ್ಣನೊಟ್ಟಿಗೆ ಕಳಿಯತ್ತಿತ್ತ್. ತನ್ನ ಅಮ್ಮ, ಅಣ್ಣಂಗೆ ಸದಾ ಬೈಯ್ಯಂಡ್, ಹೊಡ್ಕಂಡ್ ಇರ್ರುದನ ಕಂಡ್ ಅವ್ನ ಮನ್ಸ್ ಬಾಳಾ ದುಕ್ಕಪಡ್ತಿತ್.

ಅರುಣ, ಶ್ಯಾಮಣ್ಣ ಅಳ್ಬೇಡ ನಾನ್ ಅಮ್ಮಂಗೆ ನಿಂಗೆ ಹೊಡಿಬ್ಯಾಡತ ಹೇಳ್ನೆತೇಳಿ ಸಮಾಧಾನ ಮಾಡ್ತಿತ್ತ್. ಇದರ್‌ಂದ ಶ್ಯಾಂನ ಕಣ್ಣೀರ್ ಜಾಸ್ತಿ ಆಗ್ತಿತ್ತೆ ಹೊರತು ಕಮ್ಮಿ ಆಗ್ತಿತ್‌ಲೆ. ದಿನ ಕಳ್ದಂಗೆ ಒಣ್‌ಗಿಕಂಡ್ ಬರ್‌ತ್ತಿದ್ದ ಶ್ಯಾಂನ ಕಂಡ್ ಸೋಮಯ್ಯನವು ಬಾಳಾ ಮರುಗುತಿದ್ದೊ. ಇದೇ ಗ್ಯಾನಲಿ ಅವು ಹಾಸಿಗೆ ಹಿಡ್ದೊ. ತನ್ನ ಗೆಳೆಯ ಲಾಯರ್ ಭೀಮಯ್ಯನ ಕರ್ದ್ ತಮ್ಮ ಆಸ್ತಿನ ಹೆಚ್ಚ್ ಪಾಲ್‌ನ ಶ್ಯಾಂನ

ಹೆಸರ್‌ಗೆ ಮಾಡ್ದೊ. ಇದಾದ ಮ್ಯಾಲೆ ಅವು ಹೆಚ್ಚು ದಿನ ಬದಿಕಿತ್ಲೆ.

ತಾತ ಸತ್ತ ಮ್ಯಾಲೆ ಶ್ಯಾಂಗೆ ಇದ್ದ ಒಂದ್ ಆಧಾರಸ್ಥಂಭ ಸಹ ಕಳ್ಚಿ ಬಿದ್ದ್ ಹೋತ್. ಚಿಕ್ಕವ್ವನ ಅಟ್ಟಹಾಸಕ್ಕೆ ಮಿತಿ ಇತ್ತ್‌ಲೆ. ಅನಂತು ಮನೆಲೆ ಇರ್ಕನ ಅವ್ವ ಬಾರಿ ಮೆತ್ತಂಗೆ ಇರ್ತಿತ್. ಇದ್ರಿಂದ ಅವಂಗೆ ಅಷ್ಟೇನೂ ಗೊತ್ತಾಗ್‌ತಿತ್ಲೆ.

ಮಾವ ಆಸ್ತಿನ ಹೆಚ್ಚ್ ಪಾಲ್ ಶ್ಯಾಂನ ಹೆಸರ್‌ಗೆ ಮಾಡ್ದ್ ಗೊತ್ತಾದ ಮ್ಯಾಲೆ ಅವ್ವ ಸಿಟ್ಟಿಗೆ ತುಪ್ಪ ಸುರ್ದಂಗೆ ಆಗಿತ್ತ್. ಶ್ಯಾಂನ ಪಾಲಿಗೆ ಮನೆ ನರಕದಂಗೆ ಆಗಿತ್ತ್. ಮನೆಲಿ ಹೆಚ್ಚಿನ ಕೆಲ್ಸ ಎಲ್ಲಾ ಅವನ ಪಾಲಿಗೆ ಇತ್ತ್. ಮನೆ ಕೆಲ್ಸದವಳ್ನ ರಾಧಿಕಾ ಜಗಳ ಮಾಡಿ ಕಳಸಿಬುಟ್ಟಿತ್ತ್. ಹೊಟ್ಟೆ ತುಂಬ ಊಟ ಸಹ ಹಾಕ್ತಿತ್‌ಲೆ. ಅಂವ ಅನಂತನೊಟ್ಟಿಗೆ ಇರ್ಕನ ಸ್ವಲ್ಪ ಜಾಸ್ತಿ ತಿಂದ್ಬುಟ್ಟ್‌ರೆ ಅನಂತ ಅತ್ತ ಹೋಕನ ರಂಪ ಸುರು ಆಗ್ತಿತ್ತ್.

ಅವು ಸಂಪಾದ್ನೆ ಮಾಡ್ದೆಲ್ಲಾ ನಿನ್ನ ಹೊಟ್ಟೆಗೆ ಆತ್. ನನ್ನ ಮಕ್ಕಳ ಕೆಲ್ಸನೇ ನೂರೆಂಟ್ ಇದ್ದದೆ. ಅದರೊಟ್ಟಿಗೆ ನಿನ್ನ ಚಾಕರಿ ಬೇರೆ ಮಾಡಕು. ಎಲ್ಲಾರ್ ಹೋಗಿ ಸಾಯಕೇನ್. ಇಡೀ ಮನೆಗೆ ತಾನೇ ಸರ್ವಾಧಿಕಾರಿಣಿತೇಳ್ದಂಗೆ ಈ ಆಸ್ತಿ ಪೂರ ತನ್ನ ಮಕ್ಕಳಿಗೆ ಮಾತ್ರತೇಳ್ದಂಗೆ ಅವ್ವ ಚುಚ್ಚು ಮಾತ್ ಆಡ್ತಿತ್ತ್.

ಇದೆಲ್ಲಾ ತಮ್ಮ ಅರುಣಂಗೆ ಸಹಿಸಿಕೆ ಆಗ್ತಿತ್‌ಲೆ. ಆದರೆ ಅಮ್ಮನ ಎದ್ರು ಬಾಯಿಬುಟ್ಟ್ ಹೇಳಿಕೆ ಆದುಲೆ. ಅಂವ ತನಿಗೆ ಕೊಟ್ಟ ತಿಂಡಿನ ಕದ್ದ್‌ಮುಚ್ಚಿ ತಂದ್ ಶ್ಯಾಂಗೆ ಕೊಡ್ತಿತ್ತ್. ತಂಗೆ ಮಾತ್ರ ಅಮ್ಮನ ಪಡಿಯಚ್ಚ್. ಇದನ್ನೆಲ್ಲಾ ಅಮ್ಮಂಗೆ ವರದಿ ಒಪ್ಪಿಸ್‌ತಿತ್.

ಅರುಣ "ಅಮ್ಮ ಶ್ಯಾಮಣ್ಣಂಗೆ ಹೋಡಿಬೇಡಮ್ಮತ" ಮರ್ಡ್‌ತಿತ್ತ್.

"ಆ ಪರದೇಶಿನ ಇನ್ನೊಮ್ಮೆ ಶ್ಯಾಮಣ್ಣತ ಕರ್ದರೆ ನಿನ್ನ ನಾಲಿಗೆ ಸೀಳಿ ಬುಟ್ನೆತ ಕಟ್ಟಪ್ಪಣೆ ಮಾಡ್ತ್. ಆಮೇಲಿಂದ ಅಮ್ಮನ ಎದುರ್ ಶ್ಯಾಮಣ್ಣತ ಕರಿಯುವ ಸಂತುಷ್ಟಿನೂ ಅರುಣಂಗೆ ಇಲ್ಲವಾತ್.

ಒಂದ್ ದಿನ ಆರಾಮಾಗಿ ಕುರ್ಚಿಲಿ ಕುದ್ದಿದ್ದ ಅಪ್ಪನ ಹತ್ರ ಬಂದ ಅರುಣ, "ಅಪ್ಪ ನಾನೊಂದ್ ಕೇಳ್ನೆ" ತೇಳ್ತ್.

"ಕೇಳ್ ಮರಿ, ಅದೆಂತಪ್ಪ" ಅನಂತ ಕೇಳ್ತ್.

" ನೀನ್ ನಂಗೆ ಹೊಡೆಯಲೆ, ಅಣ್ಣಂಗೆ ಮಾತ್ರ ಯಾಕಪ್ಪ ಹೊಡ್ದಿಯಾ, ಮೊನ್ನೆ ತುಪ್ಪದ ಬಾಟ್ಲ್ ನಾನ್ ಒಡ್ದದ್, ಅಮ್ಮ ಅಂವನ ಮ್ಯಾಲೆ ಹಾಕಿತ್‌ತ ನೀನ್ ಪಾಪ ಅಣ್ಣಂಗೆ ಹೊಡ್ದ"

"ಹೌದು ಅರುಣ ತಪ್ಪಾತ್, ನಂಗೆ ಮತ್ತೆ ಗೊತ್ತಾತ್"

"ಇನ್ನ್ ಮುಂದೆ ಅಣ್ಣಂಗೆ ಹೊಡಿಬ್ಯಾಡಪ್ಪಾ"

"ಆತಪ್ಪಾ"

"ನಂಗೆ ಶ್ಯಾಮಣ್ಣನ ಕಂಡರೆ ಬಾಳ ಇಷ್ಟ ಅಪ್ಪಾ, ನಿಂಗೆ ಯಾಕೆ ಇಲ್ಲೆ,

"ಹೌದು ಕಂದಾ ಇನ್ನ್ ಮುಂದೆ ಅವಂಗೆ ಹೊಡಿಯಲೆ" ಅನಂತನ ಕಣ್ಣ್‌ಂದ ಹನಿ ಜಾರಿತ್.

"ಅಪ್ಪ, ಅಮ್ಮಂಗೆ ಅವನ ಕಂಡರೆ ಆದುಲೆ, ಯಾಗೊಳೊ ಹೊಡ್ದದೆ. ಅಪ್ಪ, ಅಮ್ಮ ಬರೀ ಸುಳ್ಳು ಹೇಳ್ದೆ, ನೀನ್ ಅಮ್ಮನ ಮಾತ್‌ನ ನಂಬುಬ್ಯಾಡಪ್ಪ"

"ಹೌದು ಕೂಸು, "ಆದರೆ ಏನ್ ಮಾಡ್ದು ಹೇಳ್"

"ಅಮ್ಮ ನನ್ನ ಮಾತಾಡ್ಸಿದಂಗೆ ಅಣ್ಣನ ಯಾಕೆ ಮಾತಾಡ್ಸುದುಲೆ ಅಪ್ಪಾ,"

"ಶ್ಯಾಮಣ್ಣ ಅವಳ ಮಂಜ ಅಲ್ಲಪ್ಪ, ಅವನ ಅಮ್ಮ ದೇವರತ್ರ ಹೋಗುಟ್ಟು.

ಅರುಣಂಗೆ ದುಃಖ ತಡಿಯಕೆ ಆಗದೆ ಬಿಕ್ಕಿ ಬಿಕ್ಕಿ ಮರ್ಬ್ತ್"

ಅನಂತ ಸಹ ಕಣ್ಣೀರ್ ವರ್ಸಿಕಂಡ್ ಒಳಗೆ ಹೋತ್ ಅಂವಂಗೆ ರಾಧಿಕಾನ ಎದ್ರು ವಾದಿಸೋಕ್ಕೆ ಆಗ್‌ತಿತ್ಲೆ. ಅವ್ಳು ಆ ಮಟ್ಟಕ್ಕೆ ಮನೆಲಿ ರಾಜ್ಯಭಾರ ಮಾಡ್ತಿತ್ತ್. ಅನಂತ ಅವ್ಳ ಕೈಗೊಂಬೆ ಆಗಿ ಬುಟ್ಟಿತ್ತ್.

* * * * *

ಒಮ್ಮೆ ವ್ಯವಹಾರದ ಮ್ಯಾಲೆ ಅನಂತಂಗೆ ಬೆಂಗಳೂರಿಗೆ ಹೋಕಾಗಿತ್ತ್. ನಾಲ್ಕೈದ್ ದಿನಲಿ ಬನ್ನೆತ ಹೇಳಿ ಅಂವ ಹೊರ್ಟ್ಬತ್. ಶ್ಯಾಂ ಮತ್ತೆ ಅರುಣನ ಕರ್ದ್ ಲಾಯ್ಕಲಿ ಇರಿತ ಹೇಳಿ ಅಂವ ಹೊರ್ಟ್ಬತ್. ಶ್ಯಾಂಗೆ ಬಾಳ ದುಃಖ ಆತ್, ಇನ್ನ್ ಚಿಕ್ಕವ್ವನ ಕೈಲಿ ಏನೆಲ್ಲಾ ಅನುಭವಿಸಕೂತ ಹೇಳಿ ಅವನ ಕಣ್ಣ್‌ಂದ ನೀರ್ ಬಾತ್.

ಅನಂತ ಅತ್ತ ಹೋದ್ದೇ ತಡ ಶ್ಯಾಂನ ಮ್ಯಾಲೆ ಹಲ್ಲ್‌ಕಚ್ಚ್‌ತಿದ್ದ ಚಿಕ್ಕವ್ವ ಒಂದರ ಮ್ಯಾಲೆ ಇನ್ನೊಂದುತ ಕೆಲ್ಸಗಳ್ನ ಹೇಳಿಕೆ ಸುರು ಮಾಡ್ತ್. ಅರುಣನ ಶ್ಯಾಮಣ್ಣ ಬಾಳಾ ದೀನನಾಗಿತ್ತ್. ಮನೆ ಕೆಲ್ಸ ಮಾಡಿ ಅವನ ಕೈ ಸೋತ್ ಹೋಗಿತ್ತ್. ಅವನ ಅಮ್ಮ ಬ್ಯಾರೆ ಜಾತಿಯವಳಾಗಿದ್ರಂದ ಅವಳ ಕಡೆಯವು ಯಾರ್ ಇತ್ತ ಸುಳಿಯಕೆ ರಾಧಿಕಾ ಬುಡ್ತಿತ್ಲೆ.

ಅದ್ಕೇ ಹೇಳ್ದು ವಯಸ್‌ಲಿ ಲಾಯ್ಕ ಇರ್ಕನ ಮಾತ್ರ ಎಲ್ಲಾ ನಡ್ದದೆ. ಅವುಕವುಕೆ ಅವರವರ ಜಾತಿಲಿ ಮದ್ವೆ ಆದೇ ಒಳ್ಳೆದ್ ಇಲ್ಲದಿದ್ದರೆ ಮಕ್ಕಳ ಬಾಳ್ ನರಕ ಆಗಿ ಹೋದೆ. ಅಪ್ಪ, ಅವ್ವ ಇದ್ದರೂ ಮದ್ವೆ ವಯಸ್ಸಿಗೆ ಬಾಕನ ಜಾತಿ ಪ್ರಶ್ನೆ ಬಂದೇ ಬಂದದೆ. ಪ್ರತಿಯೊಬ್ಬನು ಮದ್ವೆಗೆ ಹೆಣ್ಣ್ ಗಂಡ್ ನೋಡ್ಕ ಅವ್ವನ ಹಿನ್ನೆಲೆನ ಮೊದ್ಲು ನೋಡಿವೆ. ಹಂಗೇತೇ "ಜಲ ನೋಡಿ ಬಾವಿ ತೆಗಿ ಕುಲ ನೋಡಿ ತರಕುತ" ಗಾದೆ ಉಟ್ಟು.

ಸಣ್ಣ ವಯಸ್ಸಿನ ಮಕ್ಕಳಲಿ ಇರ್ವ ಎಲ್ಲಾ ಚಟುವಟಿಕೆಗ ಶ್ಯಾಂನಲ್ಲೂ ಇದ್ದೊ. ಈ ಚಟುವಟಿಕೆ ಕೆಲವೊಮ್ಮೆ ಸಣ್ಣಪುಟ್ಟ ತಂಟೆಯಾಗಿ ಕಾಂಬತಿತ್ತ್. ಹನ್ನೆರಡ್ ವರ್ಷದ ಮಕ್ಕಳ್‌ಲಿ ಇರ್ವ ಎಲ್ಲಾ ಗುಣಗ ಹಂಗೇ ದೋಷಗ ಸಹ ಅವನಲಿ ಇದ್ದೊ. ಇದ್

ಚಿಕ್ಕವ್ವಂಗೆ ಸಹಿಸಿಕೆ ಆಗ್ತಿತ್‌ಲೆ. ಪ್ರಾಯ ಹನ್ನೆರಡ್ ಆದರೂ ಗಂಭೀರವಾಗಿ ಇರಕುತ ಅವ್ವ ಕಟ್ಟಪಣೆ ಮಾಡಿತ್ತ್. ಹಿಂಗಾಗಿ ಅಪ್ಪ ಅತ್ತ ಹೋದ ಮ್ಯಾಲೆ ಅಂವಂಗೆ ಕಿರುಕುಳ ತಪ್ಪಿತ್‌ಲೆ.

ರಾಧಿಕಾನ ಮಕ್ಕ ಅರುಣ ಮತ್ತೆ ಕಾಂತಿ ಸಮೃದ್ಧಿಲಿ ತಿಂದ್ ಉಂಡ್ ಬೆಳಿತಿದ್ದೊ. ಆಗಾಗ್ಗೆ ಅರುಣ ಕದ್ದ್ ಮುಚ್ಚೆ ತಂದ್ ಕೊಡ್ತಿದ್ದ ತಿಂಡಿ ಬುಟ್ರೆ ಶ್ಯಾಂ ತಿಂಡಿ ಕಾಂಬದೆ ಬಾಳಾ ಸಮಯ ಆಗಿತ್ತ್.

ನಾಳೆ ಅನಂತ ವಾಪಾಸ್ ಬನ್ನೆತ ಫೋನ್ ಮಾಡಿತ್ತ್. ಅಂದ್ ಶ್ಯಾಂಗೆ ಇಸ್ಕೂಲ್‌ಲಿ ವಾರ್ಷಿಕೋತ್ಸವ ಇತ್ತ್. ಅವನ ಪ್ರೋಗ್ರಾಮ್ ಮುಗಿಯಕನ ಕತ್ತಲೆ ಆಗಿ ಬುಟ್ಟಿತ್. ಸಣ್ಣ ಮಕ್ಕಳಿಗೆ ರಜೆ ಇದ್ರಂದ ಇಂವ ಒಬ್ಬನೇ ಆಗಿತ್ತ್.

ಚಿಕ್ಕವ್ವ ಇವನ ದಾರಿ ಕಾದ್‌ಕಂಡ್ ನಿತ್ತಿತ್ತ್. "ಬಂದಾ ಮಂಜತಾ ಮುದ್ದು ಮಾಡಿಕೆ ಅಲ್ಲ. ರಾಶಿ ಬಿದ್ದಿದ್ದ ಕೆಲ್ಸ ಮಾಡಿಕೆ!!

ಅರುಣನ ಉಂಬಕೆ ಕರ್ದರೆ, ಶ್ಯಾಮಣ್ಣ ಬಂದ ಮ್ಯಾಲೆ ಉಂಡನೆತ ಅಂವ ಊಟಕೆ ಬಾತ್‌ಲೆ. ಅವನ ಎಳ್ಕಂಡ್ ಬಂದ್ ಅವನ ಬಾಯಿಗೆ ಅನ್ನ ತುರುಕಿತ್ತ್. ಅರುಣಂಗೆ ಅನ್ನ ಇಳ್ತ್‌ಲೆ, ಮರ್ಬ್‌ಕಂಡೇ ಎರ್ಡುಬಾಯಿ ತಿಂದತ್, ಒಟ್ಟಿಗೆ ಅಮ್ಮನ ಪೆಟ್ಟ್.

ಕಡೆಗೆ ತಾನ್ ಉಂಡ್, ಆ ಮಾರಿ ಬಾರದಿದ್ದರೆ ಸಾಯಲೀತ ಬಾಗ್ಲ್ ಹಾಕಿ ಮಲ್ಗಿತ್. ನಾಡ್ ಕಡೆ ಏಳುವರೆ ಗಂಟೆಗೆಲ್ಲಾ ಉಂಡ್ ಮಲ್ಗಿ ಬುಟ್ಟವೆಲ್ಲಾ, ಇವ್ಕೂ ಅದೇ ಅಭ್ಯಾಸ ಆಗಿತ್ತ್.

ವಾರ್ಷಿಕೋತ್ಸವಲಿ ಶ್ಯಾಂ ಒಂದ್ ನಾಟ್ಕಕ್ಕೆ ಸೇರಿತ್ತ್. ಅದನ್ನ ಕಡೆಲಿ ಮಡ್ಗಿದ್ರಂದ ಅಂವ ಮನೆಗೆ ಬಾಕನ ಗಂಟೆ ಎಂಟ್ ಆಗಿಬುಟ್ಟಿತ್ತ್. ಎಲ್ಲಾ ಮಕ್ಕಳೊಟ್ಟಿಗೆ ಅವ್ರ ಅಪ್ಪ ಅಮ್ಮಂದರ್ ಸಹ ಶಾಲೆಗೆ ಬಂದಿದ್ದೊ. ಇವಂಗೆ ಆ ಭಾಗ್ಯ ಇತ್ತ್‌ಲೆ. ಅವ ನೆರೆಮನೆ ಮಕ್ಕ ಇದ್ರಂದ ಅವರೊಟ್ಟಿಗೆ ಇಂವ ಮನೆಗೆ ಬಾತ್.

ಚಿಕ್ಕವ್ವ ಏನ್ ಹೇಳ್ದೇನೋತ ಹೆದ್ರಿಕೆಲಿ ಗಡಗಡ ನಡ್‌ಗಿಕಂಡ್ ಮನೆ ಬಾಗ್ಲ್‌ವರೆಗೆ ಬಂದವಂಗೆ ಬಾಗ್ಲ್ ಬಡಿಯಕೆ ಧೈರ್ಯನೆ ಬಾತ್‌ಲೆ. ಹೊರಗೆ ಮಲ್ಗನೋತೇಳ್ರೆ ಹೊಟ್ಟೆ ಹಸ್ದ್ ಪ್ರಾಣ ಹೋದಂಗೆ ಆಗಿತ್ತ್. ಕಡೆಗೆ ಎದೆ ಗಟ್ಟಿ ಮಾಡಿಕಂಡ್ ಬಾಗ್ಲ್ ತಟ್ಟಿತ್ತ್.

ಅರ್ಧಗಂಟೆ ಕಳ್ದ ಮ್ಯಾಲೆ "ಯಾರದ್" ತೇಳ್ವ– ಕೆಮಿ ಒಡ್ದು ಹೋದಂಗೆ ಸ್ವರ ಕೇಳ್ತ್. ಸ್ವರಕ್ಕಿಂತ ಹುಲಿನಂಗೆ ಗರ್ಜನೆ ಮಾಡ್ತ್. "ನಿಂಗೆ ಇಷ್ಟ ಬಂದಂಗೆ ಬಾಕೆ ಇದೇನ್ ಧರ್ಮಛತ್ರತ ಗ್ಯಾನ ಮಾಡ್ದ"

"ಇಲ್ಲೆ ಚಿಕ್ಕವ್ವ ಶಾಲೆಲಿ ನಾಟಕ ಇತ್ತ್. ನಾನ್ ಬ್ಯಾಡತೇಳ್ರು ಟೀಚರ್ ನನ್ನ ಬುಟ್ಟಿತ್‌ಲೆ. ಚಿಕ್ಕವ್ವಂಗೆ ತೊಂದರೆ ಆದೆತ ನಾನ್ ಹೇಳ್ದೆ"

"ಹಂಗಾರೆ ಆ ಟೀಚರ್ ಮನೆಗೆ ಹೋಗ್ ತಿಂಬಕೆ ಇಲ್ಲಿಗ್ಯಾಕೆ ಬಂದ"

"ಕ್ಷಮಿಸಿ, ಚಿಕ್ಕವ್ವ ಇನ್ನ್ ಮುಂದೆ ಹಿಂಗೆ ಮಾಡ್ದುಲೆ"

"ನಿನ್ನ ಅಪ್ಪಂಗೆ ಮುಂದೆನೇ ನಿಮ್ಮ ಮಂಜತೇಲ್ರೆ ನಂಗೆ ಹಿಡ್ದ ಪೀಡೆತ, ಒಂದೋ ನಾನ್ ಇರಕು, ಇಲ್ಲಾ ನೀನ್ ಇರಕುತ ಎಂತದೋ ಗ್ಯಾನ ಮಾಡಿಕಂಡ್ ಮೆಲ್ಲೆ ಗೊಣ್ಗೆಕಂಡ್ ಬಾಗ್ಲ್ ತೆಗ್ತ್.

ಒಳಕೆ ಬಾಕೆ ಜಾಗ ಸಿಕ್ಕಿದೇ ತಡ ಹೊಟ್ಟೆ ಹಸ್ದ್ ಕಣ್ಣ್ ಕಾಣದಿದ್ರು ನಂಗೆ ಹಸಿವು ಇಲ್ಲೆ ಊಟ ಬ್ಯಾಡಂತ" ಹೇಳ್ತ್. "ನಿಂಗೆ ಮಡ್ಗಿದ ಅನ್ನ ತಂಗ್ಳ ಮಾಡಿ ಯಾರ್ ತಿಂಬದ್ ಕೈ ಕಾಲ್ ತೊಳ್ಕಂಡ್ ಬಾ ಇಕ್ಕಿನೆ, ಸೇರ್ದಷ್ಟ್ ಉಂಡ್ ಮಲ್ಗ್"ತೇಳ್ತ್. ಶ್ಯಾಂಗೆ ಊಟ ಸಿಕ್ಕಿದಕ್ಕಿಂತ ಚಿಕ್ಕವ್ವನ ಮೃದುವಾದ ಮಾತ್‌ಂದ ಬಾಳಾ ಸಂತೋಷ ಆತ್. ಆದರೆ, ಎಂದೂ ಇಲ್ಲದ ಚಿಕ್ಕವ್ವನ ಮಮತೆಗೆ ಕಾರಣ ಎಂತತ ಗೊತ್ತಾತ್‌ಲೆ. ಚಿಕ್ಕವ್ವನ ಪ್ರೀತಿ ಸಂಪಾದನೆ ಅವನ ಧ್ಯೇಯ ಆಗಿತ್ತ್. ಕುಶಿಂದ ಅಂವ ಎಂತ ಊಟ ಮಾಡ್ತೊ ಗೊತ್ತಾತ್‌ಲೆ. ಊಟ ಮಾಡಿ ಬಂದ್ ಮಲ್ಗಿತ್. ಆ ರಾತ್ರಿ ಅವರಿಗೆ ಒಳ್ಳೆ ನಿದ್ದೆ!

ಮಾರನೆ ದಿನ ಎಲ್ಲವು ಎದ್ದರೂ ಅರುಣ ಎದ್ದತ್‌ಲೆ. ತಡ ಮಾಡಿ ಏಳ್ದು ಅವನ ಪದ್ಧತಿ. ಆದರೆ, ಪ್ರತಿದಿನ ಎಲ್ಲವು ಏಳಿಕೆ ಮುಂದೆ ಎದ್ದ್ ದಿನಚರಿನ ತೊಡಗುವ ಶ್ಯಾಮನ ಕೋಣೆ ನಿಶಬ್ಧವಾಗಿತ್ತ್. ಚಿಕ್ಕವ್ವ ಆ ಕಡೆ ಸುಳಿಯಕೇ ಹೋತ್‌ಲೆ.

ಅನಂತ ಇದ್ದಿದ್ದರೆ ಶ್ಯಾಂನ ಏಳಿಸ್ತಿದ್ದೊ. ಆದರೆ, ಇಂದು ಅವು ಮನೇಲಿ ಇಲ್ಲದ್ರಂದ ಅವನ ವಿಚಾರಿಸುವವೇ ಇತ್ತ್‌ಲೆ. ಅರುಣ ಹಾಸಿಗೆಲಿ ಅತ್ತ ಇತ್ತ ಹೊರಳಾಡಿ ಒಮ್ಮೆಗೆ 'ಶ್ಯಾಮಣ್ಣ'ತ ಕಿರ್ಚಿತ್.

ಬೆಳಿಗ್ಗೆ ಎದ್ದಂಗೆ ಅಂವ ಕಲ್ಪವೃಕ್ಷನ ನೋಡ್ತಿತ್ತ್. ಆದರೆ, ಅವನ ಕಲ್ಪವೃಕ್ಷ ತೆಂಗಿನ ಮರ ಅಲ್ಲ 'ಶ್ಯಾಮಣ್ಣ'

ಅಷ್ಟೋತ್ತಿಗೆ ಅಲ್ಲಿಗೆ ಬಂದ ಅವನ ಅಮ್ಮ 'ನಿನ್ನ ಶ್ಯಾಮಣ್ಣಂಗೆ ಏಳಿಕೆ ಇನ್ನೂ ಹೊತ್ತಾತ್‌ಲೆ. ಗಂಟೆ ಎಂಟಾತ್'' ತೇಳ್ತ್

"ನಾನು ಏಳ್ಸಿನೆ" ತೇಳಿ ಅರುಣ ಶ್ಯಾಂನ ರೂಮಿಗೆ ಹೋತ್. ಬಂದವನೆ ಅವನ ಹಾಸಿಗೆಗೆ ಹತ್ತಿ" ಶ್ಯಾಮಣ್ಣ, ಶ್ಯಾಮಣ್ಣ ಏಳ್, ಏಳ್'' ತೇಳಿ ಅವನ ಕುಲ್ಕಿತ್.

ಶ್ಯಾಂ ಏಳುವ ಲಕ್ಷಣ ಕಂಡತ್‌ಲೆ. ಅವನ ಕೈ ಹಿಡ್ದ್ ಎಳ್ತ್ ಅಂವ ಅಲ್ಲಾಡ್ತ್‌ಲೆ. "ಶ್ಯಾಮಣ್ಣ, ಶ್ಯಾಮಣ್ಣ" ತೇಳಿ ಅಂವಂಗೆ ಶಕ್ತಿ ಇದ್ದಷ್ಟ್ ಬೊಬ್ಬೆ ಹಾಕಿತ್. ಶ್ಯಾಮಣ್ಣನ ಕಿವಿ ಕಿವುಡಾಗಿತ್ತ್. ಅವನ ಮೈ ಮಂಜುಗಡ್ಡೆನಂಗೆ ತಣ್ಣಗೆ ಆಗಿತ್ತ್.

"ಅಮ್ಮಾ, ಅಮ್ಮಾ ಶ್ಯಾಮಣ್ಣಗೇನಾತ್ ನೋಡ್ ಬಾ"ತೇಳಿ ಮರ್ದಿಕೆ ಶುರು ಮಾಡ್ತ್. ಹೆದರಿ ಹೆದರಿ ಅಲ್ಲಿಗೆ ಬಂದ ರಾಧಿಕಾ ಶ್ಯಾಂನ ಶರೀರನ ಒಮ್ಮೆ ಮುಟ್ಟಿ ನೋಡಿ ಮುಸುಕು ತೆಗ್ದ್ ಬಾರದ ಉದ್ವೇಗಂದ ಮುಂದೇನೋ ತೇಳ್ವ ಹೆದ್ರಿಕೇಂದ "ಅಯ್ಯೊ ನಮ್ಮ ಶ್ಯಾಂ ಮಾತಾಡ್ತಾ ಇಲ್ಲೆ" ಎಲ್ಲಾ ಬನ್ನಿ ಬನ್ನಿ ತೇಳಿ ಬೊಬ್ಬೆ ಹಾಕಿತ್. ಅಷ್ಟೋತ್ತಿಗೆ ಅಲ್ಲಿಗೆ ಬಂದ ನೆರೆಹೊರೆಯವ್ರನ್ನ ನೋಡಿ ಅವಳ ದುಃಖ ಜಾಸ್ತಿ ಆತ್.

ಇವರೆಲ್ಲರ ಶೋಕಾಭಿನಯ ಮುಗಿಯಕನ ಅನಂತನವು ಬಂದ್ ತಲ್ಪಿದೊ. ಅವರ್ನ ಕಂಡ್ ಕೇಳ್ದ ಪ್ರಶ್ನೆಗೆ ಉತ್ತರ ಕೊಡದೆ ಬದ್ಲಿಗೆ,

"ನಿನ್ನೆ ರಾತ್ರಿವರೆಗೆ ಲಾಯ್ಕ ಇತ್ತಲ್ಲಪ್ಪ" ಬಾಕನ ರಾತ್ರಿ ಬೇರೆ ಆಗಿತ್ತ್. ಏನ್ ಮಾಡ್ಕಂಡ ಕಂದ, ನಿಂಗೆ ಎಂತಾತ್ ಮಗನೇ, ಅವ್ವ ಇಲ್ಲದ ಕೂಸು ನನ್ನ ಕೇಗೆ ಸಿಕ್ಕ್‌ಕನ ಅಂಬೆಕಾಲಿನ ಕೂಸಾಗಿತ್ತ್. ಇದುವರೆಗೆ ಅಂಗೈಲಿ ಇಟ್ಟ್‌ಕಂಡ್ ಸಾಕಿದೆ. ಇನ್ನ್ ನೋಡುವ ಪುಣ್ಯ ಇಲ್ಲದಾತಲ್ಲಪ" ತೇಳಿ ಗೋಳಾಡಿಕೆ ಸುರು ಮಾಡ್ತ್.

ಇವೆಲ್ಲಾ ಗೋಳಿಟ್ಟ್‌ಕಂಡ್ ಇರ್ಕನೇ ನೆರೆಮನೆಯವು ಡಾಕ್ಟರಿಗೆ ಫೋನ್ ಮಾಡಿ ಕರ್ಸಿದ್ದೊ. ಡಾಕ್ಟ್ರ ರಾಧಿಕಾನ ಹಲವು ರೀತಿಲಿ ಪ್ರಶ್ನೆ ಮಾಡ್ದೋ ಅನಂತು ರಾಧಿಕಾನ ದುರುಗುಟ್ಟಿ ನೋಡ್ತ್. ಅವ್ನ ಮನ್ಸ್‌ಲಿ ರಾಧಿಕಾ ಆಗಲೇ ಅಪರಾಧಿ ಆಗಿತ್ತ್. ಅನಂತು "ಡಾಕ್ಟರೇ, ದಯವಿಟ್ಟು ನನ್ನ ಕೂಸುನ ಬದ್ಕಿಸಿ ಕೊಡಿ ಪ್ಲೀಸ್, ನಳೀನಿನ ನೆನಪಿಗೆ ಇರ್ದು ಅವನೊಬ್ಬನೆ, ಇನ್ನ್ ಮುಂದೆ ಲಾಯ್ಕ ನೋಡಿಕಣೇ" ತೇಳಿ ಗೋಳಾಡ್ತ್.

ಡಾಕ್ಟರ್ 'ಇನ್ನೇನ್ ಪ್ರಯೋಜನ ಇಲ್ಲೆ' ತೇಳ್ವಂಗೆ ತಲೆಯಾಡ್ಸಿಬುಟ್ಟೊ. ತಮ್ಮ ಸ್ನೇಹಿತನೂ ಆಗಿರ್ವ ಅನಂತುನ ಹೊರಗೆ ಕರ್ದ್, "ಅನಂತು, ನಾನ್ ಹೇಳುವಂತದ್ನ ಹೇಳೊಕಲ್ಲ, ಹೈದಂಗೆ ವಿಷ ಪ್ರಯೋಗವಾಗುಟ್ಟು, ಮುಂದೆನ ಕೆಲ್ಸ ಬ್ಯಾಗ ಮುಗ್ಸಿ ಬುಡಿ. ಇಲ್ಲದಿದ್ರೆ ತೊಂದ್ರೆ ಆದು. ಅಥವಾ ನಿಂಗೆ ಯಾರಾರ ಮ್ಯಾಲೆ ಸಂಶಯ ಇದ್ದರೆ ಪೋಲೀಸ್ ಕೇಸ್ ಕೊಡು" ತೇಳಿ ಹೊರ್ಟ್ ಹೋದೊ. ಅನಂತಗೆ ಗೋಳಾಡ್ದು ಬುಟ್ಟ್‌ರೆ ಬೇರೆ ದಾರಿ ಇತ್ತ್‌ಲೆ. ದೇವ್ರೇ ನೀನೇ ಗತಿತ ಯಾರಿಗೂ ಅನುಮಾನ ಬಾರದಂಗೆ ಮುಂದೆನ ಕಾರ್ಯ ಮಾಡ್ತ್.

ಅರುಣಂಗೆ ಬಾಳಾ ಜ್ವರ ಅನಂತನ ಮನೆ ಶೂನ್ಯ, ಮನೆಲಿ ಭಯಂಕರ ಪರಿಸ್ಥಿತಿ. ಈಗ ಎಂದಿನಂಗೆ ಸಾಯಂಕಾಲ ಸ್ಕೂಲಿಂದ ಮನೆಗೆ ಬರ್ವ ಶ್ಯಾಂ ಇಲ್ಲೆ. ಅರುಣನ ಸಂತೋಷದ ಬೊಬ್ಬೆ ಇಲ್ಲೆ. ರಾಧಿಕಾನ ಅಬ್ಬರದ ಮಾತಿಲ್ಲೆ, ಮನೆಲಿ ಎಲ್ಲೆಲ್ಲೂ ಶಾಂತಿ, ನೀರವ ಮೌನ.

ಅನಂತುಂದ ಆಗೊಮ್ಮೆ ಈಗೊಮ್ಮೆ ಬರ್ವ ನಿಟ್ಟುಸುರ್, ರಾಧಿಕಾನ ಕಾರಣವಿಲ್ಲದ ಸಿಟ್ಟ್, ಸಿಟ್ಟ್ ತೇಳ್ರೆ ಈಗ ಅನಂತುನ ಮ್ಯಾಲೆ. ಬ್ಯಾರೆ ಬ್ಯಾರೆ ಡಾಕ್ಟರ್‌ನ ಕರ್ಸಕಾಗಿತ್ತ್. ಆ ಮದ್ದ್ ಸರಿಯಾತ್‌ಲೆ ಹಂಗೆ ಹಿಂಗೆ ತೇಳಿ. ನಡುಲಿ ಪಶ್ಚಾತಾಪ.

ಕೆಲವು ಸಲ ಶ್ಯಾಂನ ಭೀಕರಾಕಾರ ಕಣ್ಣ್ ಮುಂದೆ ನಿತ್ತಂಗೆ ಆಗ್ತಿತ್ತ್. ಅವನ ದೀನ ಸ್ವರ ಕೇಳ್ದಂಗೆ ಆಗ್‌ತಿತ್ತ್. "ಹೊಡಿಬ್ಯಾಡ ಚಿಕ್ಕವ್ವ, ಇನ್ ಯಾಗೊಳು ಹಂಗೆ ಮಾಡ್ದುಲೆ, ತೇಳ್ವ ಮಾತ್ ಬಾಣದ ಮೊನೆನಂಗೆ ಎದೆಗೆ ಕುತ್ತ್‌ತಿತ್ತ್.

ಚೆ, ಒಂದ್ ನಿಮ್ಸ ತನ್ನ ಕ್ರೂರ ಮನ್ಸ್‌ನ ಬಿಗಿ ಹಿಡ್ದಿದ್ದರೆ ಇಂದ್ ಶ್ಯಾಂ ಕಣ್ಣ್ ಮುಂದೆ ಇರ್ತಿತ್ತ್. ಅರುಣ ಸಂತೋಷಂದ ಇರ್ತಿತ್. ಇಂತಹ ಅವಸ್ಥೆಗೆ ತಾನೇ ಕಾರಣ ತಾನೇ?

ಮಾರನೆ ದಿನ ಅರುಣನ ಆಸ್ಪತ್ರೆಗೆ ಸೇರ್ಸಿದೋ, ಡಾಕ್ಟರ್ ಮದ್ದ್ ಕೆಲ್ಸ

ಮಾಡ್ತಿತ್ತ್‌ಲೆ. ಅರುಣನ ಬಾಯಿಂದ 'ಶ್ಯಾಮಣ್ಣ, ಶ್ಯಾಮಣ್ಣ' ತೇಳ್ವ ಸ್ವರ ಬುಟ್ರೆ ಅಂವ ಏನ್ ಮಾತಾಡ್ತಿತ್‌ಲೆ. ಒಂದ್ ವಾರಂದ ಊಟ ಮಾಡ್ತಿತ್‌ಲೆ. ದಿನಂದ ದಿನಕ್ಕೆ ಜ್ವರ ಏರ್‌ತಿತ್ತ್.

ಡಾಕ್ಟರ್, "ಯಾರ್ ಶ್ಯಾಮಣ್ಣ ತೇಲ್ರೆ ಅವರ್ನ ಕರ್ಸಿ. ಇವಂಗೆ ಯಾವ ಮದ್ದ್ ಹಿಡಿಸ್ತಾ ಇಲ್ಲೆ, ಮನೋರೋಗಕ್ಕೆ ಮದ್ ಇಲ್ಲೆತ ಹೇಳಿಬುಟ್ಟೊ.

ಅರುಣ ಹುಚ್ಚುಚ್ಚಾಗಿ ಮಾತಾಡಿಕೆ ಸುರು ಮಾಡಿತ್ತ್.

"ಅಪ್ಪಾ, ನೋಡು ಶ್ಯಾಮಣ್ಣ ನಿಂಗೆ ಕಾಣ್ತಾ ಉಟ್ಟ"

"ಇಲ್ಲೆಪ್ಪ ಶ್ಯಾಮಣ್ಣ ಸ್ಕೂಲಿಗೆ ಹೋಗುಟ್ಟು ಈಗ ಬಂದದೆ"

"ಸುಳ್ಳು ಅಪ್ಪ, ನೋಡು ಕಣ್ಣ್ ಮುಂದೆ ನಿತ್ತುಟ್ಟು, ಒಟ್ಟಿಗೆ ಅವನ ಅಮ್ಮ ಸಹ ಉಟ್ಟು, ಅಣ್ಣ ಮಾತಾಡ್ತಾ ಇಲ್ಲೆ ಅಂವ ಚಿಕ್ಕವ್ವಂಗೆ ಹೆದ್ರಿಟ್ಟು' ತೇಳಿ ಬಡಬಡಿಸಿತ್.

ರಾಧಿಕಾನ ನಿಟ್ಟುಸಿರ್ ಈಗ ರೋಧನವಾತ್.

"ಅಮ್ಮಾ ಅಣ್ಣಂಗೆ ಇನ್ನ್ ಮುಂದೆ ಹೊಡ್ದಿಯಾ"

"ಇಲ್ಲೆಪ್ಪಾ ಅಂವ ನಿನ್ನ ಅಣ್ಣಾ ಅಲ್ಲಾ"

"ಹಂಗಾರೆ ನಾನ್ ಅವನ ಕರ್ಕಂಡ್ ಬನ್ನೆ. ಇಲ್ಲೆ ದೂರಲಿ ನಿತ್ತುಟ್ಟು, ನನ್ನ ನೋಡಿ ನಗಾಡ್ತಾ ಉಟ್ಟು, ಅರುಣ ಬಾತ ಕರೀತಾ ಉಟ್ಟು" ತ್ತೇಳಿ ಕೈಚಾಚಿತ್.
ಅನಂತ ಮತ್ತೆ ರಾಧಿಕಾನ ಎದೆ ಒಡ್ದು ಹೋತ್.
"ಅಪ್ಪಾ, ನೀವೆಲ್ಲಾ ಇಲ್ಲೇ ಇರಿ, ನಾನ್ ಅಣ್ಣನ ಕರ್ಕಂಡ್ ಬನ್ನೆ"
ರಾಧಿಕಾ, "ಬ್ಯಾಡಪ್ಪಾ ನನ್ನ ಬುಟ್ ಹೋಬಡ"ತ ಚೀರಿತ್.
"ಅಣ್ಣಾ ನಗಾಡಿಕಂಡಿದ್ರೂ ಅವನ ಮುಖಲಿ ಸಿಟ್ಟ್ ಉಟ್ಟು, ನಾನ್ ಹೋಗದಿದ್ದರೆ ಸಿಟ್ಟ್ ಮಾಡಿಕಂಡದೆ" ತೇಳಿ ಆಯಾಸದಿಂದ ಕಣ್ಣ್ ಮುಚ್ಚಿತರ್.
"ಅಯ್ಯೋ, ನಿಂಗೆ ಎಂತ ಆಗ್ತಾ ಉಟ್ಟು ಕಂದ" ತೇಳಿ ರಾಧಿಕಾ ಎದೆ ಬಡ್ಕಂಣ್ತ್

ಅರುಣ ಮುಕವಿಕೃತ ಆತ್. ಅಂವ ಅರ್ಥ ಆಗದಂಗೆ ಏನೋ ಹೇಳ್ತಿತ್ತ್. ಅನಂತ ಅವನ ತಲೆ ತನ್ನ ತೊಡೆ ಮ್ಯಾಲೆ ಇಸಿಕಣ್ತ್.

'ಶ್ಯಾ..ಮ..ಣ್ಣಾ' ತೇಳಿ ಅವನ ಮುಕ ಒಂದ್ ಕಡೆ ಜೋತ್ ಹೋತ್. ಅವನ ಶ್ವಾಸ ನಿತ್ತ್ ಹೋತ್. ಅನಂತ- ರಾಧಿಕಾ ಇನ್ನಿಲ್ಲದಂಗೆ ಗೋಳಾಡ್ದೋ. ಶ್ಯಾಮಣ್ಣನ ಕರ್ಕಂಡ್ ಬಾಕೆ ಹೋದ ಅರುಣ ಮತ್ತೆಂದೂ ಬಾತ್‌ಲೆ.

* * * * *

# ಮೂಲ ನಕ್ಷತ್ರ

- ಶ್ರೀಮತಿ ಕಟ್ರತನ ಲಲಿತಾ ಅಯ್ಯಣ್ಣ

ಧಾರಕಾರವಾಗಿ ಮಳೆ ಸುರಿಯತಿತ್ತ್. ಹೊರಗೆ ವೆರಾಂಡಲಿ ಕುರ್ಚಿಗೆ ವರ್‍ಗಿ ಕುದ್ದ್ "ಮತ್ತೆ ಸಿಕ್ಕಿತ್ ಕುಂಕುಮ" ಕಾದಂಬರಿ ಓದ್‌ತಿದ್ದ ರಮ್ಯ ಒಂದ್ ಗಳಿಗೆ ಮಳೆನೇ ದಿಟ್ಟಿಸಿ ನೋಡ್ತ್. ಹಂಚಿನ ಸೆರೆಂದ ಸುರಿಯವೆದ್ದ ಮಳೆಯ ಮಾಲೆ, ಮಧ್ಯಂದ ಬೀಳ್ತಿದ್ದ ಮುತ್ತಿನಂತ ಹನಿಗ ಹೊಳೆವ ಬಲ್ಬಿನಂಗೆ ಕಾಂಬತಿದ್ದೊ. ಕಲಾದೃಷ್ಟಿಂದ ನೋಡಿರೆ ಎಲ್ಲಾ ವಸ್ತುವೂ ಕಲಾತ್ಮಕವಾಗಿ ಕಂಡವೆತ ನಿನ್ನೆ ತಾನೆ ಹೇಳಿದ್ದ ಅಣ್ಣನ ಮಾತಿಗೆ ಅವ್ವ ನಗಾಡಿತ್ತ್. ಆದರೆ ಇಂದ್ ನಿಜ ಅನ್ಸಿತ್. ಸೂಕ್ಷ್ಮವಾಗಿ ನೋಡಿರೆ ಪ್ರತಿಂಯೊಂದ್ ವಸ್ತುನ ಆ ದ್ಯಾವ್ರು ಕಲಾತ್ಮಕವಾಗಿಯೇ ಸೃಷ್ಟಿಸಿಟ್ಟು ಅನ್ಸಿದೆ. ಮಳೆಯ ರಭಸ ಜಾಸ್ತಿ ಆಗ್ತಾನೇ ಇತ್ತ್. ಹಂಚಿಂದ ಸುರಿಯುತಿದ್ದ ಧಾರೆ ವರುಣನ ತಾಳಕ್ಕೆ ತಕ್ಕಂಗೆ ಕೊಣ್ದಂಗೆ ಕಾಂಬತಿತ್ತ್. ಮಳೆ ಒಮ್ಮೆಗೆ ನಿಲ್ಲ್‌ಕನ ಪಡುವಲಿ ರವಿ ಇಣ್ಕಿತ್. ಅವನ ರಶ್ಮಿಗೆ ಹೊಳ್ದ ನೀರ್ ಹನಿ ಮೂಡಲಿ ಸಪ್ತ ರಾಗ ರಂಜಿತ ಕಮಾನ್‌ನ ರಚಿಸಿತ್. ರಮ್ಯ ತನಿಗೆ ಗೊತ್ತಿಲ್ಲದಂಗೆ ಭಾವ ತುಂಬಿ "ಅಮ್ಮಾ" ತೇಳ್ವ ಸ್ವರ ಹೊರ್ಬತ್. "ಎಂತ ರಮ್ಯಾ? ಕರ್ದ?" ತೇಳಿ ಚೋಂದವ್ವ ಹೊರಗೆ ಬಂದೊ.

"ಅಲ್ಲಿ ನೋಡಮ್ಮ, ಎಷ್ಟ್ ಪೊರ್ಲು!"

"ಅಲ್ಲಿ ಎಂತ ಉಟ್ಟು ಕಾಮನಬಿಲ್ಲ್. ನೀನೆಂತಾ ಯಾಗೊಳು ಹಿಂಗೆ? ಶರೀರ ಬೆಳ್ದರು ಮನ್ಸ್ ಮಾತ್ರ ಕೂಸ್‌ನಂಗೆ. ಆ ಭಗವಂತ

ಯಾಗ ಕಣ್ಣ್ ತೆರ್ದದೆನೊ ಏನೊ. ನಿನ್ನ ಸೌಭಾಗ್ಯದ ಬಾಗ್ಲ್ ಯಾಗ ತೆರ್ದದೆನೊ ಏನೊ"ತ ನಿಟ್ಟುಸಿರ್ ಬುಟ್ಟತ್.

"ಛೇ, ಇಂತ ರಸಗಳಿಗೆಲಿ ನಿನ್ನ ಪುರಾಣ ತೆಗ್ದ್ ರಸಭಂಗ ಮಾಡ್ ಬೇಡಮ್ಮ. ನಾನೇನಾರ ಕಲಾವಿದೆ ಆಗಿದ್ದರೆ, ಈ ಪೋರ್ಲನ ಹಂಗೇ ಬುಡ್ಸಿ ಬುಡ್ತಿದ್ದೆ".

"ಒಳಗೆ ನಡಿ. ಮಳೆನೆಂದ್ ಮತ್ತೆ  ಮಲ್ಗಿ ಬುಡ್‌ಬಾಡಾ. ನಿನ್ನ ತಲೆ ನೋಡ್, ಕೆದ್ರಿ ಹೋಗುಟ್ಟು. ಸರಿ ಮಾಡಿಕಂಡ್ ಬಂದ್ ತಿಂಡಿ ತಿನ್ನ್. ಲಾಯ್ಕ ಹಲ್ಸಿನ ಹಣ್ಣ್ ಇತ್ತ್. ಮಾಂಬಳ ತೆಗ್ದ್ ಕೂಗಲೆ ಹಿಟ್ ಮಾಡೊಳೆ. ಮರ್ತೆಬುಟ್ಟಿದ್ದೆ ನೋಡ್. ಶಾಂತಿದ್ ಫೋನ್ ಬಂದಿತ್ತ್. ಈಗ ಬನ್ನೆತ ಹೇಳ್ತ್. ಅವ್ಳು ಬಂದ ಮ್ಯಾಲೆ ಇಬ್ಬರು ಒಟ್ಟಿಗೆ ತಿನ್ನಿ".

"ಸರಿ ಅಮ್ಮ. ಇಬ್ಬರು ಒಟ್ಟಿಗೆ ತಿಂದವೆ. ಸರಿಯಾ?".

"ಸರಿ ಬುಡ್". ಚೋಂದವ್ವ ಒಳಗೆ ನಡ್ದೊ.

ರಮ್ಯ ಹಾರಿಕಂಡ್ ಹಾರಿಕಂಡ್ ತನ್ನ ರೂಮಿಗೆ ಹೋಗಿ ಡ್ರೆಸ್ಸಿಂಗ್ ಟೇಬಲ್ ಮುಂದೆ ಕುದ್ದತ್. ತಲೆ ಬಾಚಿಕಂಡ್ ಮುಕಕ್ಕೆ ಕ್ರೀಮ್ ಹಾಕಿ ಹೊರಗೆ ಬಾಕನ ಕಾಲಿಂಗ್ ಬೆಲ್ ಆತ್. ಒಂದೇ ಹಾರಿಗೆ ಹೋಗಿ ಬಾಗ್ಲ್ ತೆಗ್ದರೆ ಎದುರಿಗೆ ಶಾಂತಿ ನಿಂತಿತ್ತ್.

ಅವ್ಳ ಕೈ ಹಿಡ್ದ್ ಎಳ್ಕಂಡ್ ಚೋಂದವ್ವ ಇದ್ದಲ್ಲಿಗೆ ಬಾತ್. ಅಲ್ಲೇ ಕುದ್ದ್ ಅವರ ಮಾತ್‌ನ ಹೊಳೆ ಹರಿಯಕ್ಕೆ ಶುರು ಆತ್. ಶಾಂತಿ ಆಗಾಗ ಅವ್ರ ಮನೆಗೆ ಬರ್ತಿದ್ರಂದ ಅವ್ಳಿಗೆ ಮನೇಲಿ ಎಲ್ಲರೊಟ್ಟಿಗೆ ಸಲಿಗೆ ಇತ್ತ್.

ರಮ್ಯ ಮತ್ತೆ ಶಾಂತಿನ ಮಾತ್‌ಕತೆ ಕಾದಂಬರಿ, ಸಿನಿಮಾ, ಫೇಸ್‌ಬುಕ್, ವಾಟ್ಸಪ್.. ಹಿಂಗೆ ಎತ್ತೆತ್ತಲೋ ಸಾಗ್ತಿತ್ತ್. ಮಾತ್‌ನ ನಡುಲಿ ಸಮಯ ಜಾರ್‌ದೇ ಗೊತಾತ್ಲೆ. ಶಾಂತಿ ಹೊತ್ತಾತ್‌ತ ಹೊರ್ಟತ್.

ಅವಳ್ನ ಗೇಟಿಗೆ ಮುಟ್ಟ ಕಳ್ಸಿ ಬಾಕನ ಸಿನಿಮಾ ಹಾಡ್ ಹೇಳಿಕಂಡ್ ರತನ್ ಒಳಗೆ ಬಾತ್.

"ಏನಣ್ಣಾ ಬಾಳಾ ಕುಶಿಲಿ ಇದ್ದಂಗೆ ಉಟ್ಟಲ್ಲ. ಎನಿ ಗುಡ್ ನ್ಯೂಸ್?" ತೇಳಿ ಕಣ್ಣ್ ಮಿಟುಕಿಸಿತ್.

ಬಾಳಾಸಮೆಂದ ಬೆಟ್ಟನೇ ತಲೆ ಮ್ಯಾಲೆ ಕಲ್ಲ್ ಬಿದ್ದಂಗೆ ಇರ್ತಿದ್ದ ಅಣ್ಣ, ಇಂದ್ ಕುಶಿಲಿ ಇರ್ದು ಕಂಡ್ ಅವ್ಳಿಗೆ ಕುಶಿ ಆತ್.

"ರಮ್ಯ, ಬಾ ಇಲ್ಲಿ. ಒಂದ್ ಸಮಾಚಾರ ಹೇಳ್ನೆ".

"ಬೇಗ ಹೇಳಪ್ಪ. ಒಳ್ಳೆ ದಿಗ್ವಿಜಯ ಮಾಡಿ ಬಂದಂಗೆ ಆಡಿಯಾ".

"ಹಂಗೇ ತಿಳ್ಕ. ಇಂದ್ ನಂಗೆ ಯುದ್ಧನ ಗೆದ್ದಷ್ಟ್ ಕುಶಿ ಆಗುಟ್ಟು".

"ಅದೆಂತಾ ಹೇಳಿಯಾ? ಇಲ್ಲೆ ನಾನ್ ಒಳಗೆ ಹೋನೆ ಈಗ".

"ಪ್ಲೀಸ್ನೆ ಹೇಳ್ನೆ. ನೋಡು ನಾಳೆ ಇಂಟರ್‌ವ್ಯೂ ಉಟ್ಟು ಗೊತ್ತಾತ!"

"ಏನಾರಾ ಆಗಲಿ. ನಿಂಗೆ ಈ ಸಲ ಕೆಲ್ಸ ಸಿಕ್ಕಿಬುಟ್ರೆ ನಂಗೆ ಭರ್ಜರಿ ಟ್ರೀಟ್ ಕೊಡಕು".

"ಅಯ್ಯೋ ಪೆದ್ದಿ! ಇಂಟರ್‌ವ್ಯೂ ನಂಗಲ್ಲ. ನಿಂಗೆ".

"ಅಂದರೆ...." ಎಂತದೊ ಹೇಳಿಕೆ ಹೊರ್ಟವಳ ಮುಕ ಬಾಡಿ ಹೋತ್.

"ಏನ್ ಅಣ್ಣ-ತಂಗೆದ್ ಗಲಾಟೆ ತಿಂಡಿ ತಿಂಬ ಗ್ಯಾನ ಉಟ್ಟ ಹೆಂಗೆ?"

"ಅಮ್ಮಾ, ನನ್ನ ಫ್ರೆಂಡ್ ಶೇಖರ್ ಉಟ್ಟಲ್ಲ. ಅವನ ಕಡೆಂದ ಯಾರೊ ನೆಂಟರ್ನ ರಮ್ಯನ ನೋಡಿಕೆ ಕರ್ಕಂಡ್ ಬನ್ನೇತ ಫೋನ್ ಮಾಡಿತ್ತ್. ನಾಳೆಗೆ ಎಲ್ಲಾ ರೆಡಿ ಮಾಡಿಕಮ್ಮ. ಹಂಗೆ ರಮ್ಯ ನೀನ್ ನಾಳೆ ಎಲ್ಲಿಗೂ ಹೋದು ಬ್ಯಾಡ".

"ನಾನಂತು ನಾಳೆ ಖಂಡಿತ ಇರ್ದುಲೆ. ನಾನೇನ್ ಪ್ರದರ್ಶನಕ್ಕೆ ಮಡ್ಗಿದ ಗೊಂಬೆನ? ಗ್ಯಾನ ಮಾಡ್‌ದ್ರೆ ವಿಷ್ಯ ತಿಳ್ದ್ ನನ್ನ ಯಾರೂ ಮದ್ವೆ ಮಾಡಿ ಕಂಬಲೆತ ತಿಳ್ದೂ ನನ್ನ ಯಾಕೆ ಹಿಂಸೆ ಮಾಡ್ರೆ? ನಾನ್ ಕಳ್ದ ಸಲನೇ ಹೇಳ್ಯೊಳೆ, ಇನ್ನ್ ಮುಂದೆ ಇದ್ದೆಲ್ಲ ಬ್ಯಾಡತ. ಇಂತ ಒಣ ಆಡಂಬರಕ್ಕೆಲ್ಲಾ ನಾನ್ ಕಳ್ದ ಸಲಕ್ಕೆ ಮುಕ್ತಾಯ ಹೇಳ್ಯೊಳೆ.

ಸಮಾಜದ ಮೌಢ್ಯಗಳಿಗೆ ಬಲಿಯಾಗಿ ಇನ್ನೊಬ್ಬನ ಆಶಾ ಸೌಧದ ಮ್ಯಾಲೆ ಮೂಢನಂಬಿಕೆನ ಕಟ್ಟ್‌ಪಾಡ್‌ಗಳ ಗೋರಿಕಟ್ಟಿ ಹೆದರ್‌ಮುಕ್ಲ ಆಗಿ ನೆಪಮಾತ್ರದ ಜೀವನ ನಡ್ಸುವ ಮನ್ಸ ವಿಧಿಬರಹ, ದೇವ್ರನ ಬಯ್ದದೆ.

ಆದರೆ ಇದೆಲ್ಲಾ ನರಮನ್ಸರ್ ಮಾಡಿಕಂಡ ಕಟ್ಟುಪಾಡ್‌ಗ. ನಾನ್ ನಿಮಿಗೆ ಭಾರ ಆಗಿದ್ರೆ ನಂಗೆ ವಿದ್ಯೆ ಉಟ್ಟು. ನನ್ನ ಕಾಲ್‌ಮ್ಯಾಲೆ ನಿತ್ತ್ ದುಡ್ದ್ ಬದ್ಕಿನೆ". ಸಿಡ್ಲ್ ಹೊಡ್ದಂಗೆ ಅವ್ಳ ಬಾಯಿಂದ ಮಾತ್‌ಗ ಹೊರ್‍ರ್ಟೊ. ಅಷ್ಟ್ ಹೇಳಿ ಅವ್ಳು ಸರಸರತ ತನ್ನ ಕೋಂಬರೆಗೆ ಹೊರ್ಟುಹೋತ್.

ಒಂದ್ ಗಳಿಗೆ ಚೋಂದವ್ವ ಮತ್ತೆ ರತನ್‌ಗೆ ಶಾಕ್ ಹೊಡ್ದಂಗೆ ಆದರೂ ಅವು ತಕ್ಷಣ ಚೇತರಿಸಿಕಂಡೊ.

"ಯಾರಪ್ಪ ಬರ್ತಾ ಇರ್ದು? ಈಸಲನಾರ ಸರಿಯಾದೆನೊ ಏನೊ".

"ಅಮ್ಮ, ಏನಾರ ಆಗಲಿ. ಈಸಲ ಮಾತ್ರ ಅವ್ಕೆ ಮುಂದೆನೇ ಎಲ್ಲಾ ವಿಷ್ಯ ತಿಳ್ಸಿ ಬುಡೋಕು. ಎಲ್ಲ ಆಗಿ ಕಡೆಗೆ ಅವ್ಕೆ ತಿಳ್ದ್ ಬ್ಯಾಡ ತೇಳಿ ಬುಟ್ರೆ, ರಮ್ಯನ ಮನ್ಸಿಗೆ ಬಾಳಾ ಬ್ಯಾಜಾರಾದೆ".

"ಏನೋಪ್ಪಾ. ನನ್ನ ಹಣೆಬರಹನೇ ಸರಿ ಇಲ್ಲೆ. ಅಪ್ಪ ನೋಡ್ರೆ ಹಾಸಿಗೆ ಹಿಡ್ದೊಳೊ. ಇದ್ದೊಬ್ಬ ಮಗಳ ಸ್ಥಿತಿ ಹಿಂಗಾತ್. ಇನ್ನ್ ನೀನ್ ಒಬ್ಬ ಎಂತ ಮಾಡಿಯ".

"ಹಂಗ್ಯಾಕೆ ಬೇಜಾರ್ ಮಾಡಿ ಕಂಡಿಯಮ್ಮ. ಆ ದೇವ್ರು ಕಣ್ಣ್ ಬುಟ್ರೆ ಎಲ್ಲಾ ಸರಿಯಾದೆ ಬುಡ್. ಅಪ್ಪ ಈಗ ಮುಂದೆಗಿಂತ ಪರ್ವಾಗಿಲ್ಲ ಅಲ್ಲಾ? ದಿನ ಕಳ್ದಂಗೆ ಸರಿಯಾದವೆತ ಡಾಕ್ಟರ್ ಹೇಳಿಯೊಳಲ್ಲ. ಇನ್ನ್ ರಮ್ಯನ ವಿಷ್ಯಲಿ ನೀನ್ ಎಂತಾರ ಮಾತಾಡಿ ಅವ್ಳ ಮನ್ಸ್ ಕೆಡ್ಸ್‌ಬ್ಯಾಡ. ಇದ್ರಲ್ಲಿ ಅವ್ಳ ತಪ್ಪು ಎಂತ ಉಟ್ಟು? ಮೂಲ ನಕ್ಷತ್ರಲಿ ಹುಟ್ಟೋಕುತ ಅವ್ಳೇನಾರಾ ಕೇಳಿಕಂಡಿತ್ತಾ? ಅಲ್ಲಾ ನೀನೇನಾರ ಹರ್ಕೆ

ಮಾಡಿಕಂಡಿದ್ದಾ? ಎಂತಸ ಗ್ಯಾನ ಮಾಡ್ಬಡಮ್ಮ. ಈ ಸಲ ನನ್ನ ಫ್ರೆಂಡ್ ಶೇಖರ್‌ನ ಸೆಲೆಕ್ಷನ್. ಅವಂಗೆ ಹಿಂದೆನೆ ವಿಷ್ಯ ಎಲ್ಲ ತಿಳ್ಸಿವಳೆ. ಅವಂಗೆ ಯಾರಾರ ಇದ್ದರೆ ಹೇಳ್‌ತ ಹೇಳಿದ್ದೆ. ಅದ್ಕೆ ಅಂವ ಅವನ ಕಡೆ ನೆಂಟರನ್ನ ಕರ್ಕಂಡ್ ಬನ್ನೆತ ಫೋನ್ ಮಾಡುಟ್ಟು".

"ಸರೀಪಾ" ತೇಳಿ ಮುತ್ತಣ್ಣನವ್ಕೆ ವಿಷಯ ತಿಳ್ಸಿಕೆ ಹೋದೊ ಚೋಂದವ್ವ. ಮುತ್ತಣ್ಣನವ್ಕೆ ಪಾರ್ಶ್ವವಾಯು ಆಗಿ ಹಾಸಿಗೆ ಹಿಡ್ಡಿದ್ದೊ.

ಕೋಂಬರೆ ಸೇರ್ದ ರಮ್ಯ ಸುಮ್ಮನೆ ಕುದ್ದ್ ಬುಡ್ತ್. ಅವ್ಳ ಮನ್ಸ್‌ಲಿ ಯೋಚನೆಗಳ ಮಹಾಪೂರವೇ ಹರಿಯತಿತ್ತ್. ಇದ್ಕೆ ಮುಂದೆ ಸುಮಾರ್ ದಪ ನಡ್ದ ಘಟನೆಗ ಅವ್ಳ ಮನ್ಸ್‌ಲಿ ಮೂಡಿಬಂದೊ. ಒಮ್ಮೆ ರಮ್ಯಂಗೆ ಒಂದ್ ನೆಂಟಸ್ತನ ಬಂದಿತ್ತ್. ಮಾತ್ಕತೆ ಮುಗ್ದ್ ಇನ್ನ್ ಹತ್ತ್ ದಿನಲಿ ಲಗ್ನಪತ್ರಿಕೆಗೆ ಬನ್ನೆ ತೇಳಿ ಹೋದವು ಎರ್ಡೇ ದಿನಲಿ ಫೋನ್ ಮಾಡಿ, ಬಾಯಿಗೆ ಬಂದಂಗೆ ಮಾತಾಡಿದ್ದೊ. ಮೂಲ ನಕ್ಷತ್ರದ ಮಗಳ್ನ ತಮ್ಮ ಕೊರಳಿಗೆ ಕಟ್ಟಿಕೆ ಹೊರ್ಪ ವಂಚಕರ್ ತೇಳಿ ಎಲ್ಲರ ಎದೆಗೆ ಬರೆ ಹಾಕಿದ್ದೊ. ಅದ್ಕೆ ಮುಟ್ಟ ಇಂತಹ ಮೂಢನಂಬಿಕೆಗಳ್ನ ನಂಬದೆ ಇದ್ದ ಇವ್ಕೆ ಮೂಲ ನಕ್ಷತ್ರಲಿ ಹುಟ್ಟುದು ಒಂದು ಅಪರಾಧತ ತಿಳ್ದಿತ್ಲೆ. ಆಧುನಿಕ ಯುಗಲಿ ಇಂತ ವರ್ತಮಾನ ಆಶ್ಚರ್ಯ ತರ್ಸಿತ್ತ್. ಮತ್ತೆ ಒಂದೆರಡ್ ಕಡೆಂದನೂ ಇಂತದೇ ಉತ್ತರ ಬಂದಿತ್ತ್.

ಜಗತ್ತ್ ಎಷ್ಟ್ ಮುಂದುವರ್ದರೂ ಇಂತ ಕಂದಾಚಾರಗಳ್ನ ಅಷ್ಟು ಸುಲಭಲಿ ಬದಲಾಯಿಸಿಕೆ ಸಾಧ್ಯ ಇಲ್ಲೆ. ಎಲ್ಲವ್ಕೂ ತಮ್ಮ ಭವಿಷ್ಯದ ಬಗ್ಗೆ ಒಂದು ಚಿಂತೆ ಇದ್ದೇ ಇದ್ದದೆ.

ರಮ್ಯನ ಮನ್ಸ್‌ಲಿ ನಿರ್ವಿಕಾರ, ಭಾವರಹಿತ ಮನೋಭಾವ ತಾನೇ ತಾನಾಗಿ ಬೆಳ್ದ್ ಬಂದಿತ್ತ್. ಅಪ್ಪಿಗೆ ತಟ್ಟನೆ ಎಂತದೊ ಗ್ಯಾನ ಆಗಿ ಅವ್ಳು ತಲೆ ಎತ್ತಿ ಎದುರಿಗೆ ಇದ್ದ ಕನ್ನಡಿಲಿ ತನ್ನ ಪ್ರತಿಬಿಂಬನ ನೋಡಿಕಣ್ತ್. ಇಷ್ಟ್ ದಿನ ಎಲ್ಲವೂ ನೀನ್ ಬಾಳ ಲಾಯ್ಕವಳಾತ ಹೇಳ್ತಾ ಇದ್ದೊ. ಇಂದ್ ಕನ್ನಡಿನೂ ಅದೇ ಮಾತ್ ಹೇಳ್ತಾ ಉಟ್ಟುತ ಅನ್ಸಿತ್.

ಆದರೆ, ಪಾರ್ಶ್ವವಾಯುಂದ ಹಾಸಿಗೆ ಹಿಡ್ದಿರ್ಪ ಅಪ್ಪ, ಪ್ರೀತಿನ ಅಮ್ಮ, ಅಕ್ಕರೆಯ ಅಣ್ಣ- ಇವರೆಲ್ಲರ ನಿಟ್ಟುಸಿರಿಗೆ ಕಾರಣವಾದವ್ಳು ತಾನ್‌ತ ಗ್ಯಾನ ಮಾಡಿ ಎರ್ಡ್ ಹನಿ ಕಣ್ಣೀರ್ ಉದುರ್ತ್. ಎದ್ದ್ ಅಪ್ಪನ ಕೋಂಬರೆಗೆ ಹೊರ್ಟತ್.

ಆಗಲೇ ಚೋಂದವ್ವಂದ ವಿಷ್ಯ ತಿಳ್ದಿದ್ದ ಮುತ್ತಣ್ಣನವ್ರ ಮುಖಲಿ ಸಂತೋಷ ಕಾಂಬತಿತ್ತ್. ರಮ್ಯ ಅಪ್ಪನ ಹತ್ರ ಕುದ್ದ್ ಮಾತಾಡಿಕೆ ಸುರು ಮಾಡ್ತ್. ಚೋಂದವ್ವನವು ತಿಂಡಿ ಕಾಫಿನ ಅಲ್ಲಿಗೆ ತಕಂಡ್ ಬಂದೊ. ಅಷ್ಟೊತ್ತಿಗೆ ರತನ್‌ಸ ಅಲ್ಲಿಗೆ ಬಾತ್.

ರಮ್ಯನ ಬುಟ್ಟ್ ಎಲ್ಲವೂ ಕುಶೀಲಿ ಮಾತಾಡ್ದೊ. ಆದರೂ ಎಲ್ಲರ ಮನಸ್ ದೇವರಿಗೆ ಮೊರೆಯಿಡ್ತಿತ್ತ್. ರಮ್ಯನ ಮನ್ಸ್ ನಿಲಿನಪ್ತ ಆಗಿತ್ತ್.

ಇವೆಲ್ಲಾ 'ಮದುವೆ' ತೇಳ್ವ ಮೂರಕ್ಷರಕ್ಕಾಗಿ. ಯಾಕೆ ಇಷ್ಟೊಂದು ಮಹತ್ವ ಕೊಟ್ಟವೆತ

ಅರ್ಥ ಆತ್ಲೆ. ಒಂದ್ ಹೆಣ್ಣಿನ ಸ್ವಾತಂತ್ರ್ಯನ ಕಿತ್ತ್‌ಕಂಡ್ ದಾಸ್ಯದ ಸಂಕೋಲೆಂದ ಬಿಗಿದ ಈ ಕಾರ್ಯ ಅನಿವಾರ್ಯವಾ? ಅದೊಂದೇ ಬಾಳ್ನ ಗುರಿಯಾ? ಮದುವೆಂದ ಎಲ್ಲಾರ ಬಾಳ್ ಸುಖಮಯವಾದೆನಾ?

ಯೋಚನೆ ಮಾಡಿದಷ್ಟ್ ಪರಿಹಾರ ಸಿಕ್ಕದಾತ್. ಆದರೆ ತನ್ನ ರಕ್ಷಣೆ, ಒಳಿತ್-ಕೆಡಕ್, ನೋವು-ನಲಿವುಲಿ ಸಹ ಭಾಗಿಯಾಗುವಂತೆ ಒಬ್ಬ ಹೃದಯವಂತನ ಪ್ರೇಮ, ಆಶ್ರಯ ಅನಿವಾರ್ಯ ಅನ್ಸಿತ್.

"ಎಂತನೇ ಗ್ಯಾನ ಮಾಡಿಯಾ? ವಿಷ್ ಯು ಬೆಸ್ಟ್ ಆಫ್ ಲಕ್!" ತೇಳಿ ದವಡೆಗೆ ಜಿಂಟಿ ರತನ್ ಹೊರಗೆ ಹೋತ್. ತಿಂಡಿ ತಿಂದ ತಟ್ಟೆಗಳ್ನ ತಕಂಡ್ ಚೋಂದವ್ವ ಅಡಿಗೆ ಮನೆಗೆ ಹೋದೊ.

* * * * *

ಫ್ರೆಂಡ್ ಮನೆಗೆ ಹೊರ್ಟಿದ್ದ ರಮ್ಯನ ನಿಲ್ಸಿಕಂಬಕೆ ಚೋಂದವ್ವ ಮತ್ತೆ ರತನ್‌ಗೆ ಸಾಕ್‌ಸಾಕಾತ್. ಅಷ್ಟೊತ್ತಿಗೆ ಮನೆ ಮುಂದೆ ಕಾರ್ ನಿತ್ತ ಸದ್ದ್ ಕೇಳಿ ರತನ್ ಗೇಟ್ ಕಡೆಗೆ ಓಡ್ತ್.

ಶೇಖರ್ ಕಾರ್‌ಂದ ಇಳ್ದ್ ತನ್ನ ಅಪ್ಪ, ಅವ್ವ ಮತ್ತೆ ರಮ್ಯನ ನೋಡಿಕೆ ಬಂದ ಹೈದ, ಅವ್ನ ಅಪ್ಪ, ಅವ್ವನ ಇಳ್ಸಿಕಣ್ತ್. ರತನ್ ಎಲ್ಲಾರ್ನು ಸ್ವಾಗತ ಮಾಡಿ ಒಳಗೆ ಕರ್ಕಂಡ್ ಬಾತ್. ಚೋಂದವ್ವ ನೀರು, ಟವಲು ಕೊಟ್ಟು ಮಾತಾಡ್ಸಿದ್ದೊ. ಭಾವನೆ ಇಲ್ಲದ ಮುಖ ಹೊತ್ತ್‌ಕಂಡ್ ರಮ್ಯ ಎಲ್ಲವ್ರ ಕಾಲ್ ಹಿಡ್ದ್ ಒಳಗೆ ಹೋತ್.

ಕಾಫಿ, ತಿಂಡಿ ಆದ ಮ್ಯಾಲೆ ಎಲ್ಲವೂ ಮುತ್ತಣ್ಣನವ್ರ ರೂಮ್‌ಲೇ ಮಾತಿಗೆ ಕುದ್ದೊ. ರಮ್ಯ ಎಲ್ಲವ್ಕು ಒಪ್ಪಿಗೆ ಆತ್. ಮತ್ತೆ ಮದ್ವೆ ಲೆಕ್ಕಚಾರದ ಮಾತ್ ಬರ್ತಿದ್ದ ಹಂಗೆ ರತನ್, ಶೇಖರ್‌ನ ಕಡೆ ತಿರ್ಗಿ ವಿಷ್ಯ ತಿಳಿಸುವಳಾ ತೇಳುವಂಗೆ ಕಣ್ಣ್ ಮಿಟುಕಿಸಿತ್.

ಶೇಖರ್ 'ನೀನ್ ಹೇಳಿ ಬುಡ್' ತ ಸನ್ನೆ ಮಾಡ್ತ್.

ಚೋಂದವ್ವ ಮತ್ತೆ ಮುತ್ತಣ್ಣನವ್ರ ಎದೆ ಹೊಡ್ಕಣಿಕೆ ಶುರ್ ಆತ್.

ಕಡೇಲಿ ಶೇಖರ್, ರಮ್ಯನ ವಿಷ್ಯ ಹೇಳ್ಕನ ಎಲ್ಲವೂ ಹಾವು ಮೆಟ್ಟಿದಂಗೆ ಬೆಚ್ಚಿಬಿದ್ದೊ. ಚೋಂದವ್ವ , ರತನ್ ತಲೆ ತಗ್ಗಿಸಿದೊ.

"ನಮ್‌ಗ್ಯಾಕೆ ಹೇಳ್ತ್‌ಲೆ" ತ ಶೇಖರ್‌ನ ಅಪ್ಪ-ಅವ್ವ ಅಸಮಾಧಾನಲಿ ಹೇಳ್ದೊ. "ಇದ್ದಾಗಿ ಇಷ್ಟು ದೂರ ಬಾಕಾಯ್ತಲ" ತೇಳ್ವಂಗೆ ಎಲ್ಲರ ಮಾತಿನ ಧಾಟಿ ಬದಲಾತ್. ಮುಖಲಿ ನಗೆ ಬರ್ಸಿಕಂಡ್ ಅದ್-ಇದ್ ಮಾತಾಡಿ ಹೊರ್ಡುವ ಆತುರ ತೋರ್‌ಸ್ತಿದ್ದೊ. ಯಾರು ಬಲತ್ಕಾರ ಮಾಡ್ತ್‌ಲೆ.

ಹೊಸ ನೆಂಟರೊಟ್ಟಿಗೆ ಶೇಖರ್ ಮತ್ತೆ ಮನೆಯವು ಹೊರ್ಟು ನಿತ್ತೊ. ಗೆಳೆಯತೇಳ್ವ ಅಭಿಮಾನಂದ ರತನ್ ಶೇಖರ್‌ಗೆ ನಾಳೆ ಹೋಗುತ ಬಲತ್ಕಾರ ಮಾಡ್ತ್. ಒಳಗೆಂದ

ಬಂದ ರಮ್ಯ ಸ ಶೇಖರ್‌ನ ಅಮ್ಮನೊಟ್ಟಿಗೆ ಇಂದ್ ಇದ್ದ್ ಹೋಗಿತ ಬಾಳ ಕೇಳಿಕಣ್ತ್.

ಅವಳ ಸೌಜನ್ಯಪೂರ್ಣ ಮಾತ್, ನಡತೆ ಅವ್ಥ ಪೊರ್ಲುಗೆ ಅವು ಮಾರು ಹೋದೊ. ಶೇಖರಂಗೆ ಬಾಳ ಬೇಜಾರಾತ್. ಆದರು ಬಂದವು ತಪ್ಪು ತಿಳ್ಕಂಡ್ ಬುಡುವೋತೇಳಿ ಹೊರ್ಪು ಹೋದೊ.

ಮನೇಲಿ ಸದ್ದೆ ಇಲ್ಲದೆ ನಿಶಬ್ದ ಆತ್. ರತನ್ ಗೇಟ್‌ವರಗೆ ಹೋಗಿ ಎಲ್ಲಾರ್ನ ಕಳ್ಸಿಬಾತ್. ಸಾಯಂಕಾಲ ನಾಕ್ ಗಂಟೆ ಆಗಿತ್ತ್. ರತನ್ ಹೊರಗೆ ಹೋಗಿ ಬನ್ನೆತ ಹೋತ್. ರಮ್ಯ ಪೀಡೆ ಕಳ್ತ್‌ತೇಳುವಂಗೆ ಸ್ವಲ್ಪ ಸಿಂಗಾರ ಮಾಡಿಕಂಡ್ ಫ್ರೆಂಡ್ ಮನೆಗೆ ಹೊರ್ಪತ್. ಬೆಳ್ಗೆಂದ ಮನ್ಸಿಗೆ ಬಾರಿ ಮುಜುಗರ ಆಗಿದ್ರಂದ ಅವ್ಳಿಗೆ ಬದಲಾವಣೆನ ಅವಶ್ಯಕತೆ ಇತ್ತ್.

ರತನ್, ರಮ್ಯ ವಾಪಾಸ್ ಬಾಕನ ಗಂಟೆ ಆರಾಗಿತ್ತ್. ಮನೆ ಮುಂದೆ ಕಾರ್ ನಿಂತಿತ್ತ್. ನಿಶಬ್ದ ಇರಕಾಗಿದ್ದ ಮನೆಲಿ ಮಾತ್ ಕೇಳ್ಕನ ಇಬ್ಬರಿಗೂ ಆಶ್ಚರ್ಯ ಆತ್. ನೋಡಿರೆ ಶೇಖರ್ ಮತ್ತೆ ಅವನ ಅಪ್ಪ-ಅವ್ವ ವಾಪಾಸ್ ಬಂದಿದ್ದೊ.

"ಅರೆ ಶೇಖರ್...." ತೇಳ್ತ್ ರತನ್ ಆಶ್ಚರ್ಯಲಿ.

"ಹೌದಪ್ಪ. ಯಾಕೋ ನಿಮ್ಮ ಪ್ರೀತಿನ ತಿರಸ್ಕರಿಸಿ ಆ ಹೆಣ್ಣುಕೂಸ್‌ನ ಮನ್ಸಿಗೆ ಬ್ಯಾನೆ ಮಾಡಿ ಹೋಕೆ ಮನ್ಸೇ ಬಾತ್ಲೆ. ನೆಂಟ್ರನ್ನ ಬಸ್ಸ್ ಹತ್ಸಿ ವಾಪಾಸ್ ಬಂದು ಬುಟ್ಟೊ" ತೇಳ್ದೊ ಶೇಖರ್‌ನ ಅಪ್ಪ.

"ಒಳ್ಳೆದಾತ್ ಬುಡಿ" ತೇಳಿ ರತನ್ ಶೇಖರ್‌ನ ಎಳ್ಕಂಡ್ ತನ್ನ ರೂಮಿಗೆ ಹೋತ್.

ಎಲ್ಲವ್ಕು ಬಾಳಾ ಕುಶಿ ಆಗಿತ್ತ್. ಚೋಂದವ್ವ ಶೇಖರ್‌ನ ಅವ್ವನ ಕರ್ಕಂಡ್ ಅಡುಗೆ ಮನೆಗೆ ಹೋದೊ. ಇಬ್ಬರು ಮಾತಾಡಿಕಂಡ್ ರಾತ್ರಿಗೆ ಅಡುಗೆ ಶುರು ಮಾಡ್ದೊ. ರಮ್ಯನು ಅವರೊಟ್ಟಿಗೆ ಸೇರಿಕಂಡ್ ಸಹಾಯ ಮಾಡ್ತ್. ಶೇಖರ್‌ನ ಅಪ್ಪ ರತನ್‌ನ ಅಪ್ಪನ ರೂಮಿಗೆ ಹೋಗಿ ತಮ್ಮ ವಯಸ್ಸಿಗೆ ಸಹಜವಾದ ಲೋಕರೂಢಿನ ಮಾತಾಡಿಕೆ ಶುರು ಮಾಡ್ದೊ.

ಚೋಂದವ್ವ ರಾತ್ರಿ ಗದ್ದಳ ಊಟ ತಯಾರ್ ಮಾಡಿದ್ದೊ. ಹಂದಿಗೈಪು-ಕಡಂಬಿಟ್ಟ್, ಕೋಳಿಸಾರ್-ನೂಪಿಟ್ಟ್, ರೊಟ್ಟಿ, ಪಾಯಸ ಎಲ್ಲಾ ಗೌಜಿಲಿ ಉಂಡ್ ಮಾರನೆ ದಿನ ಎಲ್ಲವೂ ಹೊರ್ಪು ಹೋದೊ. ಸಂತೋಷಂದ ಇದ್ದ ಮನೆ ಮತ್ತೆ ಬಿಕೊ ತೇಳ್ತ್.

ಮತ್ತೆ ಎಲ್ಲವೂ ತಮ್ಮ ತಮ್ಮ ಕೆಲ್ಸಗಳಲಿ ತೊಡಗ್ಸಿಕೊಂಡೊ. ಮಾರನೆ ದಿನ ಶೇಖರ್‌ನ ಫೋನ್ ಬಾತ್.

"ರತನ್ ನಾವ್ ಮೊನ್ನೆ ವಾಪಾಸ್ ಬರದೆ ನಿಮ್ಮನೇಲಿ ಉಳ್ದದ್ ದೇವರ ಕೃಪೆ. ನಿಮ್ಮೊಟ್ಟಿಗೆ ಬಂದಿದ್ದ ನೆಂಟರ್ ಹೋದ ಬಸ್ಸ್, ಆಕ್ಸಿಡೆಂಟ್ ಆಗಿ ಎಲ್ಲಾ ಆಸ್ಪತ್ರೆ ಸೇರಿವಳೊ. ಮತ್ತೆ ಒಂದ್ ಗುಡ್ ನ್ಯೂಸ್! ನಾವ್ ವಾಪಾಸ್ ಬಾಕನ ನನ್ನ ಅಪಾಯಿಂಟ್‌ಮೆಂಟ್ ಆರ್ಡರ್ ಬಂದಿತ್ತ್. ನಂಗೆ ಬ್ಯಾಂಕ್‌ಲಿ ಕೆಲ್ಸ ಸಿಕ್ಕುಟ್ಟು".

"ತುಂಬಾ ಸಂತೋಷ ಶೇಖರ್".

"ಇದಕ್ಕೆಲ್ಲಾ ಎಂತ ಕಾರಣಗೊತ್ತಾ?"

"ಇಲ್ಲೆ.. ಹೇಳಪ್ಪ.."

"ಅಪ್ಪ, ಅವ್ವ ಎಲ್ಲಾ ಹೇಳ್ತಾವಳೊ. ಇದ್ ರಮ್ಯನ ಮೂಲ ನಕ್ಷತ್ರದ ಪ್ರಭಾವತ. ಅಪರಾಧಕ್ಕೆ ತಕ್ಕ ಶಿಕ್ಷೆಗೆ ಅವ್ಳಿಗೆ ಆಕು ಅಲ್ಲಾ. ಅದ್ಕೆ ರಮ್ಯಂಗೆ ಒಂದು ಪನಿಶ್‌ಮೆಂಟ್ ಕೊಡಕುತ ತೀರ್ಮಾನ ಮಾಡಿವಳೊ".

"ಅದೆಂತಪ್ಪಾ" ಗಾಬರಿಲಿ ರತನ್ ಕೇಳ್ತ್.

"ಹೇಯ್ ಗಾಬರಿ ಆಗ್‌ಬ್ಯಾಡ. ರಮ್ಯನ ಆದಷ್ಟ್ ಬ್ಯಾಗ ನಮ್ಮ ಮನೆಗೆ ಸೇರ್‍ಸಕುತ ತೀರ್ಮಾನ ಮಾಡಿವಳೊ".

ಶೇಖರ್‌ನ ಮಾತ್ ಕೇಳಿ ರತನ್‌ನ ಕಣ್ಣ್‌ಲಿ ನೀರ್ ಬಾತ್.

"ನೀನ್ ತಮಾಸೆ ಮಾಡ್ತಾ ಇಲ್ಲೆ ತಾನೆ?"

"ಇದ್ರಲ್ಲಿ ತಮಾಸೆ ಮಾಡ್ದು ಎಂತ? ಅಪ್ಪ ನಿಮ್ಮ ಅಪ್ಪನೊಟ್ಟಿಗೆ ಮಾತಾಡ್ವೇತ ಹೇಳಿವಳೊ".

"ಶೇಖರ್, ನೀನ್ ರಿಯಲಿ ಗ್ರೇಟ್".

"ಸರಿಯಪ್ಪಾ. ರಮ್ಯನ ಅಭಿಪ್ರಾಯ ತಿಳ್ದ್ ಫೋನ್ ಮಾಡ್".

ರತನ್ ಕುಶಿಲಿ ಅಪ್ಪ ಅವ್ವಂಗೆ ವಿಷ್ಯ ತಿಳ್ಸಿಕೆ ಒಳಗೆ ಓಡ್ತ್. ಶೇಖರ್ ಮತ್ತೆ ಅವನ ಅಪ್ಪ ಅವ್ವನ ದೊಡ್ಡ ಮನ್ಸ್‌ನ ಗ್ಯಾನ ಮಾಡಿ ಎಲ್ಲವೂ ಮೂಕರಾದೊ. ರತನ್‌ಗೆ ತನ್ನ ಗೆಳೆತನ ಸಾರ್ಥಕ ಆತ್‌ತ ಅನ್ಸಿತ್. ಒಂದ್ ಮನೆಲಿ ಬೆಳಕ್ ಹೊತ್ತಿಸಿದ ದೇವರಂತವುಕ್ಕೆ ಎಲ್ಲವೂ ಮನಸ್ಸ್‌ಲೇ ವಂದಿಸಿದೊ. ರಮ್ಯನ ಮುಖ ಕುಶಿಲಿ ಅರಳಿದ ತಾವರೆನಂಗೆ ಆಗಿತ್. ಶೇಖರ್ ಮೂಢನಂಬಿಕೆಗೆ ಸವಾಲಾಗಿ ನಿಲ್ಲುವ ಪ್ರಯತ್ನ ಮಾಡಿತ್ತ್.

* * * * *

ನೆಂಪುನ ಜೊಂಪೆ

# ಶಾಪದ ಮಳೆ

– ವಿನೋದ್ ಮೂಡಗದ್ದೆ

ಇದ್ ನಾ ಕೇಳ್ದ ಕತೆ. ಮಳೆತೇಲ್ರೆ ಮಕ್ಕಳಿಗಂತೂ ಖುಷಿನೋ ಖುಷಿ. ರೈತರಿಗೂ ಅಷ್ಟೆ. ಆದರೆ ಅದೇ ಮಳೆ ಬಾರದೇ ಹೋದರೆ 'ಎಂತ ಕಾಲ ಬಾತಪ್ಪಾ ಒಂದ್ಹನಿ ಸಾ ಮಳೆ ಇಲ್ಲೆ. ಇನ್ನ್ ಏನೇನ್ ನೋಡಕೋ ಏನೋ. ಬೇಡದ ಕಡೆಗೆ ಉಪಕಾರಕ್ಕೆ ಇಲ್ಲದೆ ಸುರ್ದದೆ. ಬೆಳ್ದ ಬೆಳೆ ಹಾಳ್ ಮಾಡಿಕೆ. ಇಲ್ಲಿ ಕಾಫಿ ಗಿಡಗ ಒಣ್ಗಿಕಂಡ್ ಮೆಣ್ಸ್ ಕೊತ್ತು ಉದ್ರಿರೂ ಮಳೆ ಇಲ್ಲೆ'. ಇನ್ನ್ ಮಳೆ ಬುಡದೇ ಸುರ್ದರೆ.... 'ಥುತ್ ಎಂತ ಸಾವ್ನ ಮಳೆ ಇದ್. ಇದ್ಕೆ ಹೊತ್ತು ಗೊತ್ತು ಒಂದೂ ಇಲ್ಲೆನ? ಮೊನ್ನೆ ಸುರು ಆದ್ ಇನ್ನೂ ನಿಲ್ಲಿಕೆ ಗ್ಯಾನ ಇಲ್ಲೆ ಕಂಡದೆ. ಕಾಫಿ ಹೂ ಹೋಕನ ಮಳೆ ಬಂದರೆ ಆತ್ ಈ ವರ್ಷ ಕಾಫಿ ಆದಂಗೆ. ಇನ್ನು ಮೆಣ್ಸ್ ಕತೆ ಅಷ್ಟೆ. ಅದೇ ಪಿರಿಪಿರಿ ಮಳೆ ಬಂದರೂ 'ಎಂತ ಮಳೆ ಇದ್. ಬಂದರೆ ಒಮ್ಮೆಗೆ ಬಂದ್ ಹೋಕ್.. ಇಲ್ಲರೆ ಸುಮ್ಮನೆ ಇರಕು. ಅತ್ತನೂ ಅಲ್ಲ ಇತ್ತನೂ ಅಲ್ಲದೆ ಮಳೆ ಇದ್'ತ ಜನ ಗೊಣ್ಗಿಕಂಡೇ ಇದ್ದವೆ.

ಮಳೆ ಹೆಚ್ಚಾದರೂ ಬೈಯ್ಯವೇ.. ಕಮ್ಮಿ ಆದರೂ ಬಯ್ಯವೇ.. ಯಾಕೆ ಹಿಂಗೆ ತಾ ಎಲ್ಲರ ಮನ್ಸಲ್ಲೂ ಪ್ರಶ್ನೆ ಇದ್ದೇ ಇದ್ದದೆ.

ಒಮ್ಮೆ ಒಂದು ದೊಡ್ಡ ಕಾಡ್‌ಲಿ ಸಕಲ ಚರಾಚರಗ ಜೀವಿಸ್ತಾ ಇದೋ. ಆ ಕಾಡಿನ ರಾಜ ನಾವ್ಗೆಲ್ಲ ಗೊತ್ತಿರಂಗೆ ಸಿಂಹ ರಾಜ. ಒಂದು ದಿನ ಕಾಡಿನ ಎಲ್ಲ ಪ್ರಾಣಿ ಪಕ್ಷಿಗ ಸಭೆ ಸೇರಿದೋ. ಎಲ್ಲವೂ ಒಮ್ಮತಂದ ಆ ವರ್ಷ ವನದೇವತೆಯ ಹುಟ್ಟು ಹಬ್ಬನ ಆಚರಿಸಕೂತ ತೀರ್ಮಾನ ಮಾಡ್ದೋ.

ಕಾಡ್ನ ನಡುಲಿ ಇರ್ವ ಬಾಣೆಲಿ ಜಂಬರನ ನಡ್ಸಿಕೆ ನಿಶ್ಚಯಿಸಿದೋ. ಹಂಗೆನೆ ಅದರ ತಯಾರಿಗೆ ಬೇರೆ ಬೇರೆ ಕೆಲ್ಸನ ನಿರ್ವಹಿಸಿಕೆ ಒಂದೊಂದು ಪ್ರಾಣಿಗೂ ಒಂದೊಂದು ಜವಾಬ್ದಾರಿನ ಕೊಟ್ಟೋ. ಕಪಿಗ ಚಪ್ಪರದ ಮಾಡ್ ಹಾಸಿಕೆ. ಜಿರಾಫೆಗ ಉದ್ದನೆ ಕಂಬಗಳ ನೇಚಿ ಕೊಡಿಕೆ. ಕಾಡ್ ಹಂದಿಗ ಎಲ್ಲ ಕಾಡ್‌ನ ಉಕ್ಕಿ ಹಾಕಿಕೆ ಸಿದ್ದ ಆದೋ. ನವಿಲ್ – ಕೋಗಿಲೆಗ ಮನರಂಜನೆ ಕಾರ್ಯಕ್ರಮ ನೀಡಿಕೆ ಒಪ್ಪಿದೋ. ಆನೆಗ ಅಂಗಳಕ್ಕೆ ಎಲ್ಲ ನೀರ್ ಹಾರ್ಸಿ ಧೂಳ್‌ನ ಹೋಗ್ಸಿಕೆ

ತಯಾರಾದೋ. ಹಿಂಗೆ ಒಂದೊಂದು ಪ್ರಾಣಿಗ ಒಂದೊಂದು ಜವಾಬ್ದಾರಿನ ಒಪ್ಪಿಕಣ್ಣನ ಎಲ್ಲೋ ಇದ್ದ ಮಳೆ ಒಮ್ಮೆಲೇ ಓಡಿ ಬಂದ್ 'ನಂಗೆ ಸ ಏನಾರ್ ಕೊಡಿ, ವನ ದೇವತೆಯ ಹುಟ್ಟುಹಬ್ಬಲಿ ನಂಗೂ ಏನಾರ್ ಜವಾಬ್ದಾರಿ ಕೊಡಿ'ತಾ ಕೇಳ್ತ್.

ಸಿಂಹ ರಾಜಂಗೆ ಕೊಡಿಕೆ ಮನ್ಸಿತ್ಲೆ. ಮೊದ್ಲೇ ಮಳೆ ಸೋಮಾರಿ ಎಲ್ಲಾರ್ ಕೈ ಕೊಟ್ಟರೆ ತಾ ಒಂದು ಕಡೆ, ಏನೂ ಕೊಡದೇ ಇದ್ದರೆ ಅದೇ ಸಿಟ್ಟ್‌ಲಿ ಏನಾರ್ ಕಿತಾಪತಿ ಮಾಡ್ದುತ ಸ ಹೆದ್ರಿಕೆ ಆತ್. ಕಡೆಗೆ 'ಸರಿ ನೆಲಕ್ಕೆ ನೀರ್ ಹಾಕಿಕೆ ಆನೆಗಳಿಗೆ ಹೇಳಿದ್ದೋ. ಅವ್ಕೆ ಅಷ್ಟು ದೂರಂದ ನೀರ್ ತಂದ್ ಹಾಕ್‌ಕನ ಬಚ್ಚುದು, ಅದೂ ಅಲ್ಲದೆ ಒಂದೇ ಸಮನೆ ಹಾಕಿಕೆ ಸ ಆಲೆ. ನೀ ಸರೀ ಹೊತ್ತಿಗೆ ಬಂದ್ ಮೇಲೆಂದ ನೀರ್ ಹನ್ನಿಸಿರೆ ಆದೆ'ತಾ ಹೇಳ್ತ್. ಮಳೆ ಬಾಳ ಕುಸಿಂದ ಸರಿ ತೇಳಿ ಅಲ್ಲಿಂದ ಹೋತ್.

ಹುಟ್ಟು ಹಬ್ಬ ಹತ್ರ ಬಾತ್. ಎಲ್ಲವೂ ಕುಸಿಂದ ಕೆಲ್ಸ ಸುರು ಮಾಡ್ದೋ. ಕಾಡ್‌ನ ಎಲ್ಲ ಕಡ್ದ್ ಬಾಣೆನ ಚೊಕ್ಕಟ ಮಾಡಿ ಇಟ್ಟೋ. ದೂಳೆಲ್ಲ ಹೋಕುತಾ ಆದರೆ ಮಳೆಯ ಸಿಂಚನ ಆಕು. ಎಷ್ಟು ನೋಡ್ರು ಮಳೆಯ ಸುಳಿವೇ ಇಲ್ಲೆ. ಸಮಯ ಆಗ್ತಾ ಉಟ್ಟು. ಏನ್ ಮಾಡ್ದು ತಾ ಗೊತ್ತಾಗದೆ ಕಡೆಗೆ ಆನೆಗಳೇ ನೀರ್ ಹಾರ್ಸಿ ಚಪ್ಪರ ಎಲ್ಲ ಹಾಕಿ ವೇದಿಕೆ ಸ ಸಿದ್ಧ ಮಾಡಿ ಆತ್.

ಅದೇ ಹೊತ್ತ್‌ಗೆ ಸಮುದ್ರ ಕರೆಲಿ ಮಲ್ಕಂಡಿದ್ದ ಮಳೆಗೆ ಒಮ್ಮೆಲೆ ಎಚ್ಚರ ಆತ್. 'ಅಯ್ಯೋ ಇಂದ್ ವನ ದೇವರ ಹುಟ್ಟುಹಬ್ಬ. ನಂಗೆ ನೀರ್ ಹಾರ್ಸಿಕೆ ಹೇಳಿದ್ದೋ ನಾನ್ ನಿದ್ದೆ ಮಾಡಿಕಂಡೇ ಬಾಕಿ ಆಗೋದೆ. ತಪ್ಪಿಸಿದರೆ ಆಕಿಲೆ' ತಾ ಒಂದೇ ಸಮನೆ ಅಲ್ಲಿಂದ ಬಾಣೆ ಕಡೆ ಹೊರ್ಟತ್. ಕೆಳಗೆ ಏನುಟ್ಟು ಏನಿಲ್ಲೆ ತ ನೋಡದೆ ಒಂದೇ ಸಮ ಮಳೆ ಸುರ್ಸಿತ್.

ಅದಾಗಲೇ ಅಲ್ಲಿ ಎಲ್ಲ ಸಿದ್ಧತೆಗ ಆಗಿತ್. ಒಂದೇ ಸಲ ಮಳೆ ಬಂದದ್ದರ್‌ಂದ ತೀರಾ ಚೆಂಡಿ ಆಗಿ ಮಾಡ್ದ ಕೆಲ್ಸ ಎಲ್ಲ ಹಾಳಾತ್. ಹೇಳ್ದ ಹೊತ್ತಿಗೆ ಸರಿಯಾಗಿ ವನ ದೇವತೆ ಬಾತ್. ನೋಡ್ರೆ ಚಪ್ಪರ ಎಲ್ಲ ಚೆಂಡಿ ಆಗಿ ಪ್ರಾಣಿ ಪಕ್ಷಿಗ ಎಲ್ಲ ಚಳಿಲಿ ನಡ್ಗಿಕಂಡ್ ಇದ್ದೊ.

ವನ ದೇವತೆಗೆ ಸಿಟ್ಟ್ ತಡ್ಯಕೆ ಆತ್ಲೆ. ಮಳೆ ಕಡೆ ನೋಡ್ತ್. ಮಳೆ ಪೆಚ್ಚ್ ಮೋರೆ ಹಾಕಂಡ್ ಇತ್ತ್. ಇಷ್ಟ್ ಕಷ್ಟ ಪಟ್ಟ್ ಮಾಡ್ದ ಏರ್ಪಾಡ್ನೆಲ್ಲ ನೋಡದೆ ಹಾಳ್ ಮಾಡ್‌ದಲ ಎಲ್ಲರ ಶ್ರಮ ಎಷ್ಟಿತ್ ತ ನಿಂಗೆಂತ ಗೊತ್ತುಟು. ಅದ್ಕೆ ನಾ ನಿಂಗೆ ಶಾಪ ಇಸ್ತಾ ಒಳೆ, ಇನ್ನು ಮುಂದೆ ನೀನ್ ಏನೇ ಮಾಡ್ರು ಜನ ನಿಂಗೆ ಬೈಕಂಡೇ ಇರಕು;' ತಾ ಹೇಳಿ ದೇವತೆ ಅಲ್ಲಿಂದ ಹೊರ್ಟ್ ಹೋತ್.

ಮಳೆ ಎಷ್ಟೇ ಕೇಳಿಕಂಡರೂ ಏನೂ ಉಪಯೋಗ ಆತ್ಲೆ. ಹಂಗೆ ಅಂದ್‌ಂದ ಇಂದ್‌ನವರೆಗೂ ಮಳೆ ಹೆಂಗೇ ಬಂದರೂ ಜನಗ ಬೈಕಂಡೇ ಇದ್ದವೆ.

* * * * *

# ನೀರನೊಟ್ಟಿಗೆ ಸಿಟ್ಟ್ ಮಾಡ್ರೆ ಪುಕುಳಿಲಿ ಹುಳಾದು ಗಡ

– ಎಂ.ಜಿ ಕಾವೇರಮ್ಮ

"ಅಲ್ಲ  ನಾ ಮಾಡ್ದ ತೊಪ್ಪಾದರೂ ಏನ್? ಅದ್ ನಂಗೆ ಅಷ್ಟೆಲ್ಲಾ ಬೊಯ್ತುಲೆ? ನಾ ಯಾರ್? ಅದರ ಹೆತ್ತಯ್ಯೆ ನಾ ಎಷ್ಟ್ ಕಷ್ಟ ಪಟ್ಟ್ ಅದರ ಸಾಂಕಿದೆ? ಅದೆಲ್ಲಾ ಅದ್ಕೆ ಈಗ ಮರ್‍ತೋತ್‌ಅಲ್ಲ? ಒಂದು ಪುಂಡಿ ಗಂಜಿನ ಹೊಟ್ಟೆಗಿಲ್ಲದಿಕ್ಕೆ  ಕೊಟ್ಟದಕ್ಕೆ ಅದ್ ಅಷ್ಟೆಲ್ಲಾ ಬೊಯ್ಯೊಕೂಂತ ಇತ್ತಾ? ಇಂತಾ ಎಷ್ಟ್ ಪುಂಡಿ ಗಂಜಿನ ಆ ಅಜ್ಜಿ ನಾಗಜ್ಜಿ ಇದಕ್ಕೆ ಸಣ್ಣದಿರಿಕನ ತಿನ್ಸಿರ್ದು? ಅದೆಲ್ಲಾ ಇದಕ್ಕೆ ಮರ್‍ತೋತೋ ಹೇಂಗೆ?' ಎಂದೆಲ್ಲಾ ಏಚನೆ ಮಾಡಿಕಂಡ್ ಆಕ್ಕಣು ಬೀಸ ಬೀಸ ನಡ್ಕಂಡ್ ಹೋಗಿತ್ತ್.

ರಣ ರಣ ಬಿಸ್‌ಲಿಲಿ ಸಿಟ್ಟ್‌ನ ಕೈಗೆ ಬುದ್ಧಿನ ಕೊಟ್ಟ್ ಅಕ್ಕಣು ಹೆಂಗಸ್ ಬಿರಬಿರನೆ ಹೋಗಿತ್ತ್. ಅದ್ ಎಲ್ಲಿಗೆ ಹೋದೂಂತ ಅದ್ಕನೆ ಗೊತ್ತುಟೊ ಇಲ್ಲೆನೊ?  ಬರೆ ಕಾಲ್‌ಲಿ ಕೈ ಬೀಸಿಕಂಡ್ ತಲೆ ಸುಡಿಕನ ಸೆರ್‌ಂಗ್‌ನ ತಲೆ ಮೇಲೆ ಸುಂಪೆ ಹಾಂಗೆ ಇಸಿಕಂಡ್ ಮೊನ್ಸ್‌ಗೆ ಬಂದ ಹಾಂಗೆ ಮಗಳ ಮೇಲೆನ ಸಿಟ್ಟಂದ್ ನಡ್ಯತಿತ್ತ್ ಎದ್ರ್‌ಗೆ  ಹಳ್ಳ ಸಿಕ್ಕಿಕನನೇ ಅದ್ಕೆ ನೆಂಪಾದ್, ನಾ ಹಳ್ಳದ ಹಕ್ಕಲೆ ಬಂದಳೇಂತ. ಹಳ್ಳಕೆ ಇಳ್ದ್ ಕೈ ಮೋರೆಗೆ ನೀರ್ ಹಾಕಂಡ್, ಹೊಟ್ಟೆ ತುಂಬಾ ನೀರ್ ಕುಡ್ದ್ ಹಳ್ಳ ದಾಟಿ ಆಕರೆ ಆಲೇಟಿಗೆ ಹೋವ ದಾರಿಲಿ ನಡ್ಕಂಡ್ ಹೋಗ್‌ತಿತ್ತ್. ಪುಣ್ಯಕೆ ದಾರಿಲಿ ಯಾರೂ ಗುರ್ತುನೊವು ಸಿಕ್ಕಿತ್ಲೆ. ನಡ್ದ್ ನಡ್ದ್ ಬೊಚ್ಚಿಕನ ಅಲ್ಲೇ ದಾರಿ ಪುಡೆಲಿದ್ದ ಸಾಂತಿಕಾಯಿ ಮರದಡಿಲಿ ಕೈ ಕಾಲ್ ನೀಂಡಿ ಕುದ್ದತ್. ಅದ್ಕೆ ಹಿಂದೆದೆಲ್ಲಾ ಒಂದೊಂದೆ

ನೆಂಪಾಕೆ ಸುರಾತ್. ಅಕ್ಕಣಿ, ಅಮುಣಿ ಅಕ್ಕ ತಂಗೆಕಳ ಇಬ್ಬರನೂ ಒಟ್ಟಿಗೆ ಸಣ್ಣದಿರ್‌ಕಾಕನ ಅವ್ವ ಮದ್ವೆ ಮಾಡ್ಸಿ ಗಂಡನ ಮನೆಗೆ ಕಳ್ಸಿತ್. ಅಪ್ಪ ಮಕ್ಕ ಸಣ್ಣದಿರಿಕಾಕನೇ ಸತ್ತ್ ಹೋಗಿತ್ತ್ ಕೂಲಿ ಕೆಲ್ಸ ಮಾಡುವ ಅವ್ವ ಅವರಾಂಗೆ ಕೆಲ್ಸ ಮಾಡುವ ಎರ್ಡ್ ಹೈದಂಗಳ ಹುಡ್ಕಿ ದೇವಸ್ಥಾನಲಿ ಮೊದ್ವೆ ಶಾಸ್ತ್ರ ಮಾಡಿ ಕಳ್ಸಿತ್. ಮಗಕ್ಕಳ ಮದ್ವೆ ಮಾಡಿ ಎರ್ಡ್ ವರ್ಸಲಿ ಅಯ್ಯೆನೂ ತೀರಿ ಹೋತ್ .ಅಕ್ಕುಣಿಗೆ ಮೊದ್ವೆ ಆಗಿ ಹತ್ತ್ ವರ್ಸ ಕಳ್ದರೂ ಅದ್ಕೆ ಮಕ್ಕ ಆತ್ಲೆ. ಇದ್ ಗೊಡ್ಡುದನಾಂತ ಅದರ ಗಂಡ ಬೇರೆ ಮೊದ್ವೆ ಆಕೆ ಹೊರ್ಟತ್. ಆದರೆ ಅಂವಂಗೆ ಅದೃಷ್ಟ ಇತ್ಲೆ. ಒಂದು ದಿನ ಅಂವ ಜಂಬರದ ಮನೆಲಿ ಸಮಾ ಹೊಟ್ಟೆ ಬಿರಿಯ ತಿಂದ್ ಬಂದ್ ಮಲ್ಗಿದವಂಗೆ ಕಟ್ರೆ ಸುರಾತ್. ಆಗನ ಕಾಲಲಿ ಹಳ್ಳಿ ಮದ್ದ್ ಕೊಡ್ತಿದ್ದೊ. ಅದ್ ಫಲಕ್ಕೆ ಬಾತ್ಲೆ. ಪಂಡಿತರ್ ಮೊದ್ ಕುಡ್ದ ಮೇಲೆ ನೀರ್ ಕುಡ್ಯಕೆ ಕೊಡಿಕೆ ಬತ್ತ್‌ಂದ ಹೇಳಿದ್ದೊ. ಅಂವ ಹೊಣ್ಕೆ ಹೊಣ್ಕೆ ನೀರ್ ಕೊಡೀಂತ ಕೇಳಿರೂ ಯಾರೊಬ್ಬರೂ ನೀರ್ ಕುಡ್ಸಿತ್‌ಲೆ. ಅಕ್ಕುಣಿನ ಕಣ್ಣೆದ್ರೆ ನೀರ್ ನೀರಂತ ಹೊರ್ಡ್ಯಾಡಿ ಕಂಡ್ ಜೂವ ಬುಟ್ಟತ್. ಅದರೆಲ್ಲಾ ಇಗ ನೆನ್ಸಿಕನ ಅದ್ಕೆ ತುಂಬಾ ಹೆದ್ರಿಕೆ ಆಗ್ತಿತ್ತ್. ಆಗನ ಕಾಲದ ಪೊಡಂಬು ಜನಗ ಪಂಡಿತರ್ ಹೇಳ್ದರನೇ ಕೇಳ್ತಿದ್ದೊ. ಗಂಡ ಸತ್ತ ಮೇಲೆ ಅಕ್ಕುಣಿಗೆ ಅತ್ತ ಗಂಡನ ಮನೆನೂ ಇಲ್ಲೆ, ಇತ್ತ ತವರು ಮನೆನೂ ಇಲ್ಲೆ. ಹಾಂಗಾಗಿ ಸೀದಾ ತಂಗೆ ಅಮುಣಿ ಹಕ್ಕಲೇ ಕೇರ್ಪಳಕೆ ಬಾತ್. ತಂಗೆನೂ ಗತಿಗೆಟ್ಟ ಬಾಳ್‌ನನೇ ಬಾಳ್ತಿತ್ತ್. ನಾಕ್ ಮಕ್ಕಳ ಕಟ್ಟಕಂಡ್ ಗಂಡ, ಹೆಣ್ಣ್ ಕೆಲ್ಸ ಮಾಡಿಕಂಡ್ ಒಂದು ಜೋಂಪುಡಿಲಿ ಬಾಳ್ತಿದ್ದೊ. ಅಕ್ಕ ಬಾಕನ ತಂಗೆಗೆ ಕುಸಿನೂ ಆತ್ಲೆ ಬೇಜಾರನೂ ಆತ್ಲೆ. ಅಕ್ಕುಣಿನೂ ತಂಗೆಗೆ ಹೊರೆ ಆಗಿ ಬಾಳ್ತಿಲ್ಲೆ. ಕೂಲಿ ಕೆಲ್ಸ ಮಾಡಿ ಸಿಕ್ಕಿದರ ತಂಗೆಗೆ ಕೊಡ್ತಿತ್ತ್.

ಹೀಂಗಿರಿಕಾಕನ ಅವರೊಟ್ಟಿಗೆ ಕೂಲಿಕೆಲ್ಸ ಮಾಡಿಕಂಡಿದ್ದ ತ್ಯಾಂಪನ ಪರ್ಚಯ ಆತ್. ಅಂವಂಗೂ ಹೆಣ್ಣ್ ಸತ್ತ್ ಹೋಗಿತ್ತ್. ಮಕ್ಕ ಮೊರಿ ಇತ್ಲೆ. ಅಮುಣಿನೂ ಅದರ ಗಂಡನೂ, ಅವನೊಟ್ಟಿಗೆ ಅಕ್ಕುಣಿನ ಕೊಡುವಳಿ ಮಾಡಿಕಂಬಕೆ ಮಾತಾಡ್ಯೊ. ಅಂವನೂ ಒಪ್ಪಿತ್. ಹಾಂಗೆ ಅಮುಣಿನ ಮನೆಲೇ ಸೀರೆ ಕೊಡುವ ಶಾಸ್ತ್ರ ಮಾಡಿ ಕೈ ಹಿಡ್ಸಿ, ತಾಳಿಕಟ್ಟಿ ಅಂವನೊಟ್ಟಿಗೆ ಅಕ್ಕುಣಿನ ಕಳ್ಸಿದೊ.ಅಂವನ ಮನೆಂತೇಳ್ವ ಜೋಂಪುಡಿ, ಕೇರ್ಪಳಲಿ ಹತ್ತ್ ಮಾರ್ ದೂರಲಿ ಇತ್ತ್, ಅಲ್ಲಿ ಗಂಡ ಹೆಣ್ಣ್ ಸಂಸಾರ ಮಾಡ್ಯೊ.

ಎಲ್ಲವ್ಕೂ ಚೋದ್ಯ ಆಗುವ ಹಾಂಗೆ ಮದುವೆ ಆಗಿ ಹತ್ತೇ ತಿಂಗಳ್‌ಲಿ ಗೊಡ್ಡಿದನ ಕರ್ ಹಾಕಿತ್. ಅಕ್ಕುಣಿಗೆ ಹೆಣ್ಣ್ ಕೂಸು ಆತ್. ಆದರೆ ಈ ಹರ್ಷ ಹೆಚ್ಚ್ ದಿನ ಅಕ್ಕುಣಿ ಪಾಲ್‌ಗೆ ಒಳ್ತ್‌ಲೆ. ಕೂಸು ಹುಟ್ಟಿ ಆರೇ ತಿಂಗಳ್‌ಲಿ ಅಕ್ಕುಣಿನ ಗಂಡ ಕಾಡಿಗೆ ಸೊಯ್ದೆ ತಾಕೆ ಹೋದಂವ ಹಾವು ಕಚ್ಚಿ ಸತ್ತತ್. ಅಕ್ಕುಣಿನ ಬಾಳ್ ಮೂರಾ ಬಟ್ಟೆ ಆತ್. ಹಿಂದೆ ತನ್ನ ಒಂದು ಹೊಟ್ಟೆನ ತುಂಬುಸಿಕೆ ಕಷ್ಟ ಪಡಕಾಗಿತ್ತ್. ಈಗ ಕೂಸು ಬೇರೆ ಉಟ್ಟು. ಎಲ್ಲಾ ನನ ಹಣೆ ಬರಾಂತ ನೆನ್ಸಿಕಂಡ್, ಹಲ್ಲ್ ಕಚ್ಚಿಕಂಡ್ ಕೂಸುನ ಮೋರೆ ನೋಡಿಕಂಡ್ ದಿನ ದೂಡ್ತಿತ್ತ್. ಒಂದು ನಾಕ್ ವೊರ್ಸ ಅದರ

ಪಾಡ್ ನಾಯಿ ಪಾಡ್ ಆತ್. ಆ ಹೂ ಕೂಸುನ ಕಟ್ಟಿಕಂಡ್ ಕೆಲ್ಸಕೆ ಹೋಗುವ ಮನೆವರ ಬೈಗಳ್ ತಿಂದ್ಕಂಡ್ ಅರೆ ಹೊಟ್ಟೆಲಿ ದಿನ ದೂಡ್ತಿತ್ತ್. ಆ ಸಮಯಲಿ ಎಷ್ಟೋ ಸಲ ಅದರ ಪಕ್ಕದ ಮನೆ ನಾಗಜ್ಜಿ ಇದಕ್ಕೆ ಸಾಯ ಮಾಡ್ತಿತ್ತ್ ಅಕ್ಕುಣಿ ಕೆಲ್ಸಕೆ ಹೋಕನ ಕೂಸುನ ನೋಡಿಕಂಬೊದು. ಅದಕ್ಕೆ ಉಣ್ಸುದು, ತಿನ್ಸುದು ಮಾಡ್ತಿತ್ತ್ . ಕಷ್ಟ ಕಾಲಲಿ ಅಯ್ಯೆ ನಾಂಗೆ ಸಾಯ ಮಾಡ್ದ ನಾಗಜ್ಜಿಗೆ ಇಂದ್ ಒಂದು ಮುಂಡಿ ಗಂಜಿ ಅಕ್ಕುಣಿ ಕೊಟ್ಟತ್. ಅದರ ಮಗ ಗೌರಿ ಬಾಕನ ತಣ್ಣಾ ಗಂಜಿ ಇಲ್ಲದಕ್ಕೆ ಅಯ್ಯೆಗೆ ಸಮಾ ಬೊಯ್ತ್. ಅದುನೂ ಒಂದು ಮೈಲ್ ದೂರ ಇರುವ ಸುಳ್ಯ ಪೇಟೆಗೆ ಬೀಡಿ ತಕಂಡ್ ಒಂದು ಬೊಳ್ಪುಗೆ ಹೋದವುಳಿಗೆ ಈ ರಣ ಬಿಸಿಲ್‌ಲಿ ಮನೆಗೆ ಬಾಕಕನ ಸಾಕಾಗಿತ್ತ್. ಬೆಗರ್‌ಲಿ ಇಡೀ ಮೈ ಚಂಡಿ ಆಗಿತ್ತ್. ಆಗ ಅಯ್ಯೆ ಅದರ ಎದ್ರಿಗೆ ಬಿಸಿ ಬಿಸಿ ಗಂಜಿ ಬಟ್ಲ್‌ನ ಇಸಿಕಾಕನ ಅದರ ಮೊನ್ಸ್‌ಗೆ ಹೇಂಗಾಗಿರಿಕಿಲ್ಲೆ? ಅದರ ಪಿತ್ತ ನೆತ್ತಿಗೇರ್ತ್. ಬೊಳ್ಪುಗೆ ಮನೆ ಬುಡಿಕಾಕನ ಒಬ್ಬ ಉಂಬಸ್ಟ್ ಗಂಜಿ ಮಡ್ಕೆಲಿ ಇತ್ತ್. 'ಅದ್ ಏನಾತ್' ಎಂತ ಅಯ್ಯೆನ ಕೇಳಿಕಾಕನ ಅದರ ನಾಗಜ್ಜಿಗೆ ಕೊಟ್ಟೆಂತ ಹೇಳ್ತ್. ಬಿಸ್ಲ್‌ಗೆ ಬಂದ ದಣ್ಕೆಲಿ ಹೊಟ್ಟನೂ ಇಸಿಕಾಕನ ಮಗಳಿಗೆ ಸಿಟ್ಟ್ ಬಾರದೆ ಇದ್ದದೆನೋ?

" ನೀ ಏನ್ ದಾನ ಸೂರ ಕರ್ಣನೋ? ನಾವ್ಗೆ ಇಲ್ಲಿ ತಿಂಬಕೆ ಗತಿ ಇಲ್ಲೆ. ಇದ್ ಮನೆಗೆ ಬಂದೊವ್ಕೆ ಎಲ್ಲಾ ದಾನ ಮಾಡಿಕೆ ಹೊರ್ಟುಟು. ನಾಳೆನ ಏಚನೆ ನಿಂಗೆ ಒಟ್ಟೋ?" ಎಂತ ಸಿಟ್ಟ್‌ನ ಮತ್ತ್‌ಲಿ ಅಕ್ಕುಣುಗೆ ಸಮಾ ಬೊಯ್ತ್. ಅಯ್ಯೆಗೂ ಪಿಸ್ರ್ ಬಾತ್. ಹಾಂಗೆ ಅಯ್ಯೆ  ಮಗ ಇಬ್ಬೊರಿಗೂ ಇಕ್ಕಿಸಿದ ಗಂಜಿ ಬಟ್ಲ್ ಎದ್‌ರ್ ಮಾರಾ ಮಳಿರಿ ಜಗಳ ಆತ್ ಮಗಳ ಮಾತ್ ಕೇಳಿಕಾಗದೆ ಅಯ್ಯೆ ಬೀಸ ಬೀಸ ಹೊರಗೆ ಹೋತ್.

"ಎಲ್ಲಿಗೆ ಹೋದೆ? ಹೊಟ್ಟೆ ಇಸಿಕಾಕನ ಮನೆಗೆ ಬಂದೇ ಬಂದದೆ"ಂತ ಮಗಳ್ ಅಯ್ಯೆನ ಕ್ಯಾರೇ ಮಾಡ್ತಿಲ್ಲೆ ಹೊಟ್ಟೆ ಇಸಿದ ಗೌರಿ ಬಿಸಿ ಗಂಜಿಗೆ ನೀರ್ ಹೊಯ್ದ್ ಉಪ್ಪು ಮೇಣ್ಸ್ ಚಿರಿಂಬಿ ಹೊಟ್ಟೆ ತುಂಬಾ ಉಂಡತ್. ಹೊಟ್ಟೆ ತುಂಬಿದ ಮೇಲೆ ಗೌರಿನ ಸಿಟ್ಟ್ ಕಡ್ಮೆ ಆತ್ ಆಗ ಗೌರಿಗೂ ಹಿಂದೆದೆಲ್ಲಾ ನೆಂಪಾತ್. ಅವ್ವ ನನ್ನ ಸಾಂಕಿಕೆ ಎಷ್ಟ್ ಕಷ್ಟಪಟ್ಟು ಹಾಕಿಕೆ ಅಂಗಿ ಇಲ್ಲದೆ ಹೋದ್ಯಕೆ ಅರ್ವೆ ಇಲ್ಲದೆ ಇರಿಕಾಕನ ಕೆಲ್ಸಕೆ ಹೋಗುವ ಮನೆಲೆಲ್ಲಾ ಬೇಡಿ ತಂದ್ ನನ್ನ ಸಾಂಕ್‌ತಿತ್ತ್. ನಾ ಹೇಂಗೂ ಕಲ್ತ್ತೆ ನನ್ನ ಮಗಳಾದರೂ ನಾಕಕ್ಷರ ಕಲ್ಯಲೀಂತ ಗೌರಿನ ಅಯ್ಯೆ ಕೇರ್ಪಳ ಸಾಲೆಗೆ ಸೇರ್ಸಿತ್. ಅಂತೂ ಅರೆ ಹೊಟ್ಟೆ ಉಂಡ್‌ದ್ ಅವರಿವರ ಮನೆ ಚಾಕ್ರಿ ಮಾಡಿ ಮಗಳ ಎಂಟನೇ ಕ್ಲಾಸ್ ಮುಟ್ಟ ಓದಿಸಿತ್. ಈಗೀಗ ಗೌರಿಗೂ ಅಯ್ಯೆನ ಕಸ್ಟ ಅರ್ತ ಆಗ್ತಿತ್ತ್. ನನ್ನಿಂದಾಗಿ ಅವ್ವ ಕಷ್ಟ ಪಡ್ದು ಬೇಡಾಂತ ಗೌರಿ ಎಂಟನೇ ಕ್ಲಾಸ್ ಮುಟ್ಟ ಓದಿ, ಸಾಲೆ ಬುಟ್ಟ್ ಬೀಡಿ ಕಟ್ಟಿಕೆ ಸುರು ಮಾಡ್ತ್. ವಾರಕ್ಕೆ ಮುನ್ನೂರು ನಾನೂರು ರೂಪಾಯಿ ಸಂಪಾದ್ನೆ ಮಾಡಿಕೆ ಸುರು ಮಾಡ್ತ್. ಗೂಡೆ ನೊಡಿಕೆ ಪೊರ್ಲು ಉಟ್ಟೊಂತ

ಅವರ ಹಳೆ ಸಂಬಂಧದಂವ ಒಬ್ಬ ಇದರ ಮೊದುವೆ ಆತ್. ಅಂವಂಗೂ ಯಾರೂ ಇತ್ಲೆ. ಹಾಂಗಾಗಿ ಅಂವ ಮನೆ ಆಳ್ಯ ಆಗಿ ಇವರ ಮನೆಲೆ ಇತ್ತ್. ಮೊದುವೆ ಆದ ಮೇಲೆ ಗಂಡನ ಸಂಪಾದನೆನೂ ಸಾಯ ಆತ್. ಸುರುಗೆ ಗೌರಿ ಮಾಡ್ದ ಕೆಲ್ಸ ಜೋಂಪುಡಿ ಹಾಂಗಿದ್ದದರ ಮನೆ ರೂಪಕ್ಕೆ ತಾವುದರ. ಎರ್ಡ್ ಕೋಣೆದ ಮನೆ ಕಟ್ಟಿ ಹಂಚ್ ಹಾಕ್ಸಿತ್. ಹಿಂದೆ ಮುಂದೆ ಇಳ್ಸಿ ,ಅಡ್ಗೆಗೆ, ಕುದರಿಕೆ ಏರ್ಪಾಡ್ ಮಾಡತ್. ಮನೆಗೆ ಪಾತ್ರ, ಪಡಗ, ಮೇಜ್, ಕುರ್ಸಿ ಬಾತ್ ಇನ್ನ್ ಅಜ್ಜಿ ಅವ್ವ ಕೆಲ್ಸ ಮಾಡ್ದು ಬೇಡಾಂತ ಕೆಲ್ಸಕ್ಕೆ ಕಳ್ಸುದರ ನಿಲ್ಸಿತ್. ಮನೆಲಿದ್ದ್ ಕಂಡ್ ಕೋಳಿ ಸಾಂಕಿಕಂಡ್ ಇರ್. ನಿಂಗೆ ಒಂದು ಏಡ್‍ನ ಮೊರಿನ ತೆಗ್ದ್ ಕೊಟ್ಟನೆ ಎಂತ ಹೇಳಿ ಗೌರಿ ಅಯ್ಯೆಗೆ ಒಂದು ಏಡ್‍ನ ಮೊರಿನ ತಗ್ದ್ ಕೊಟ್ಟತ್ ,ಹಾಂಗೆ ಅಕ್ಕುಣಿ ಕೆಲ್ಸಕ್ಕೆ ಹೋದರ ನಿಲ್ಸಿ ಕೋಳಿ, ಏಡ್‍ನ ಸಾಕಿಕಂಡ್ ಮೆನೆಲೇ ನಿತ್ತತ್.

ಮನೆ ಕಟ್ಟಿಕೆಂತ ಗೌರಿ ಸ್ವಸಾಯ ಸಂಗಂದ ಇಪ್ಪತ್ತೈದ್ ಸಾವಿರ ಸಾಲ ತಕಂಡಿತ್ತ್. ಗೌರಿ ದುಡ್ದರ ಎಲ್ಲಾ ಸಾಲ ಕಟ್ಟಿಕೆ ಕೊಡ್ತಿತ್ತ್. ಗಂಡನ ದುಡಿಮೆಲಿ ಮೂರು ಜನರ ಹೊಟ್ಟೆ ತುಂಬೊಕು. ಸಣ್ಣದಿರಿಕನನೇ ಹೊಟ್ಟೆ ಕಟ್ಟಿ ಗೊತ್ತಿದ್ದ ಗೌರಿ ತಿಂಬಕೆ ಉಂಬಕೆ ಹೆಚ್ಚ್ ಕರ್ಚ್ ಮಾಡ್ತಿತ್ಲೆ. ಇದ್ದದರ್ಲೆ ಸುದಾರ್ಣೆ ಮಾಡತಿತ್ತ್. ಆದರೆ ಅಕ್ಕುಣಿಗೆ ನೆರೆ ಕರೆವು ಎಲ್ಲೊವೂ ಬೇಕ್. ಬಂದೊವ್ಕೆಲ್ಲಾ ಒಂದ್ ಗ್ಲಾಸ್ ಕಣ್ಣ ಚಾನಾದರೂ ಅದ್ಕೆ ಮಾಡಿ ಕಡೊಕು  ಉಂಬ ಹೊತ್ತಿಗೆ  ಯಾರಾರ್ ಬಂದರೆ ಇದ್ದದರನೇ ಪಾಲ್ ಮಾಡಿ ಬಂದೋವ್ಕೆ ಕೊಡ್ತಿತ್ತ್. ಇದ್ ಮಗಳಿಗೆ ಆಗ್ತಿತ್ಲೆ. ನಾವ್ಗೆ ಸಾಕಾದ್ಲೆ. ಇದ್ ದಾನ ಮಾಡಿಕೆ ಹೊರ್ಪದೇಂತ ಆಗಾಗ ಅಯ್ಯೆಗೆ ಸಮಾ ಬೊಯ್ತಿತ್ತ್. 'ನಾಯೆ ಬೀಲ ಡೊಂಕು'ಂತ ಹೇಳ್ವ ಹಾಂಗೆ ಅಕ್ಕುಣಿ ಮಗಳ ಬೊಯ್ಗಳ್ಮಂದ ಏನ್ ಬದ್ಲಾತ್ಲೆ. ಕದ್ದ್ ಮುಚ್ಚಿ ಬಂದೊವ್ಕೆ ಕೊಡ್ತಿತ್ತ್. ಇಂದ್‍ನ ದಿನನೂ ಅದ್ ಅದೇ ಕತೆ.

ನಾಗಜ್ಜಿಗೆ ಮನೆಲಿ ಸೊಸೆ ಹೊಟ್ಟೆ ತುಂಬ ಕೊಡ್ತಿತ್ಲೆ. ಅದ್ ಕೆಲ್ಸಕೆ ಹೋಕನ ಮಡ್ಕೆ ಕಾಲಿ ಮಾಡಿ ಹೋಗ್ತಿತ್ತ್. ಅದ್ ಕೆಲ್ಸದ ಮನೆಂದ ಹೊಂಬೊತ್ತ್ ಬಂದ ಮೇಲೆನೇ ನಾಗಜ್ಜಿಗೆ ಹೊಟ್ಟೆಗೆ ಬೀಳ್ದು. ಏನ್ ಮಾಡ್ದು? ಇರ್ದು ಒಬ್ಬ ಮಂಜ. ಎಲ್ಲಿಗೆ ಹೋದು? ಹಾಂಗಾಗಿ ನಾಗಜ್ಜಿ ಹೊಟ್ಟೆ ಇಸಿಕಾಕನ ನೆರೆ ಕರೆ  ಮನೆಗೆ ಹೋಗಿ, ಬೇಡಿ ಹೊಟ್ಟೆ ತುಂಬುಸಿಕಂತಿತ್ತ್.  ಅದ್ಗೂ ಪ್ರಾಯ ಎಂಬತ್ತ್ ಕಳ್ತ್ ದುಡಿಯಕ್ಕೆ ಸಕ್ತಿ ಇಲ್ಲೆ ಇದ್ ಗೌರಿ ಇಲ್ಲದಿರಿಕಾಕನ ಮನೆಗೆ ಬಂದ್ ಅದ್ ಕೊಟ್ಟದರ ತಿಂದ್ ಹೋಗ್ತಿತ್ತ್.

ಹೊತ್ತ್ ಹಿಂಬೊತ್ತಾದರೂ ಅಕ್ಕುಣಿ  ಮನೆಗೆ ಬಾತ್ಲೆ ಗೌರಿಗೆ ಚಿಂತೆ ಸುರು ಆತ್. ಅವ್ವ ಎಲ್ಲಿಗೆ ಹೋಗಿರ್ದು? ಅದ್ ಇನ್ನ್ ಮುಟ್ಟ ಬಾತ್ಲೇಂತ ಏಚನೆ ಸುರಾತ್. ನಾಳೆ ನಂಗುನೂ ಒಂದೆರ್ಡ್ ಮಕ್ಕ ಆದರೆ ನಾ ಸಣ್ಣದಿರಿಕಾಕನ ಪಟ್ಟ ಕಷ್ಟ ನನ್ನ ಮಕ್ಕ ಪಡಿಕಾಗದ್ ಅದ್ಕೆ ಈಗಂದಳೇ ಒಂದೆರ್ಡ್ ಕಾಸ್ ಕೂಡ್ಸಿ ಇಸೊಕು. ಕಾಸ್ ಕೂಡ್ಸೊಕುಂತೇಳ್ರೆ ಕರ್ಚ್ ಕಮ್ಮಿ ಮಾಡೊಕು. ಇದೆಲ್ಲಾ ನನ್ನ ಅವ್ವಂಗೆ ಹೇಳ್ರೆ ಗೊತ್ತಾದ್ಲೆ. ಅದ್ಕೆ ಇಂದ್ ದಿನ ಕಳ್ದರೆ ಆತ್. ನಾಳೆನ ಚಿಂತೆ ಇಲ್ಲೆ. ಹೀಂಗೆಲ್ಲಾ ಗೌರಿನ ಮೊನ್ಸಲಿ

ನಡಿತಲೇ ಇತ್. ಅದ್ ಕಾಲ್ ಸುಟ್ಟ ಕೊತ್ತಿನ ಹಾಂಗೆ ಅತ್ತಂದ ಇತ್ತ ಇತ್ತಂದ ಅತ್ತ ತಿರ್ಗ್ಯಾಡಿಕಂಡ್ ಇಜ್ಜೆಲ್‌ಲಿ ನಿಂತ್ ಅವ್ವನ ತಲೆ ಕಂಡದೆನೋಂತ ದಾರಿ ನೋಡಿಕಂಡ್ ಇತ್. 'ಛೇ ನಾ ಅವ್ವಂಗೆ ಹಾಂಗೆಲ್ಲಾ ಬೊಯ್ಯಕಾಗದಿತ್ತ್ ನಾಗಜ್ಜಿನೂ ನಾ ಸಣ್ಣದಿರಿಕನ ನನ್ನ ಮೊರ್‍ಲ್ಲು ಸಾಂಕಿಟ್ಟು ಗಡ ಹಾಂಗೆಂತ ನನ್ನ ಕೂಸುನ ಕೆಳಗಿಳ್ಸಿ ಇನ್ನೊಬ್ಬರ ಕೂಸುನ ಎತ್ತಿಕಂಬಕಾದೆನೋ? ಅದ್ಕೆ ಅದರ ಮಂಜ ಸೊಸೆ ಒಳೊ ಅದರ ಸಾಂಕುದು ಅವರ ಕೆಲ್ಸ. ದಿನಾ ಅದರ ಸಾಂಕಿಕೆ ನಾವಾದೆನೋ? ಹಿಂಗೆ ಹತ್ತ್ ಬಗೆಲಿ ತಲೆ ತುಂಬಾ ಏಚನೆ ಮಾಡಿ ಮಾಡಿ ಗೌರಿನ ತಲೆನೇ ಕೆಟ್ಟ್ ಹೋತ್. ಅವ್ವ ಏನಾದರೂ ಮಾಡಿಕಂಡರೇಂತ ಕೆಟ್ಟ ಏಚನೆನೂ ತಲೆಲಿ  ಬಾತಿತ್. ಹೊತ್ತ್ ಮುಣಂಗಿಕಾಕನ ಕೋಳಿಗಳೆಲ್ಲಾ ಗೂಡುಗೆ ಸೇರಿಕೆ ಬಂದೊ. ಕೋಳಿಗಳ ಏಡ್‌ಗಳ ಚಾಕ್ರಿ ಎಲ್ಲಾ ಅಕ್ಕುಣುನೇ ಮಾಡ್ತಿತ್. ಇಂದ್ ಗೌರಿನೇ ಅದರೆಲ್ಲಾ ಮಾಡ್. ಗಂಡ ಕೃಷ್ಣ ಬಾತ್ ಗೌರಿ ಮೊರ್‍ದ್ವವ ದನಿಲಿ ಅಯ್ಯೆ – ಮಗಳ ಜಗಳದ ವಿಷಯ ಗಂಡಂಗೆ ಹೇಳ್. ಅಂವನೂ ಪಾಪದಂವ ಅಂವ ಸಮಾ ಹೆಣ್ಣ್‌ಗೆ ಬೊಯ್ತ್. ಈ ಪ್ರಾಯ ಹೋವ ಕಾಲಲಿ ಯಾಕೆ ಅವ್ಕೆ ಬೊಯ್ಯಕೆ ಹೋದ? ಅವು ಮನಿ ಜೂವ ತೆಕಂಡರೆ. ಏನ್ ಮಾಡ್ಯ?" ಎಂತ ಕೇಳ್. ಅವಿಬ್ರೊರು ಸುತ್ತ ಮುತ್ತ ಮನೆಲೆಲ್ಲಾ ಅಕ್ಕುಣಿ ಬಂದುಟಾಂತ ಕೇಳ್ದೊ  ಎಲ್ಲೂ ಅದರ ಸುಳಿವಿಲ್ಲೆ ಇಬ್ಬರೂ ಉಂಡ ಶಾಸ್ತ್ರ ಮಾಡಿ ಮೊಂದ್ರಿಲಿ ಬಿದ್ದಕಂಡೊ. 'ದೇವ್ರೆ ನನ್ನ ಅವ್ವ ಮನೆಗೆ ಬಾಂವ ಹಾಂಗೆ ಮಾಡ್, ನಿಂಗೆ ಜೋಡ್ ಹಣ್ಣ್ ಕಾಯಿ ಮಾಡ್ಸಿನೆ" ಎಂತ ಗೌರಿ ಚೆನ್ನಕೇಶವ ದೇವ್ರ್‌ಗೆ ಹರ್‍ಕೆ ಹೇಳಿಕಂಡತ್. ಇರ್‍ಲ್ ಇಡೀ ಅತ್ತಂದ ಇತ್ತ ಇತ್ತಂದ ಅತ್ತ ಹೊರ್‍ಳ್ಯಾಡಿ ಅವಿಬ್ರೊರು ಕಳ್ದೊ. ಬೊಳ್ಪಾಕಾಕನ ಕೋಳಿ ಕೂಂಗಿತ್. ಮೈ ನೀರ್ ಬುಡಿಕೇಂತ ಗೌರಿ ಎದ್ದ್ ಹೊರಗೆ ಬಾತ್, ಇಜ್ಜೆಲ್‌ಲಿ ಮೈ ನೀರ್ ಬುಟ್ಟ್‌ದ್ ಹಿಂದೆ ತಿರ್‍ಗಿ ನೋಡ್ದೆ ಚಿಮಿ ಚಿಮಿ ಬೊಳ್ಪುಲಿ ಯಾರೋ ಗುಡಿ ಹೊದ್ದ್‌ಕಂಡ್, ಬಾಳೆ ಬುಡಲಿ ಚುದ್ಕರ ಕುದ್ಕಂಡೋಳೊ. ಅದ್ಕೆ ಒಮ್ಮೆ ಹೆದ್ರಿಕೆ ಆತ್. ಗಂಡನ ಕರ್‍ತ್ ಅಂವ ಹೊರಗೆ ಬಾತ್ ಬಾಕನ ಗೌರಿ ಬಾಳೆ ಬುಡಕೆ ಕೈ ತೋರ್‍ಸಿದ್ ಸನ್ನೆ ಮಾಡ್. ಅಂವ ಹಕ್ಕಲೆ ಹೋಗಿ ನೋಡಿಕನ ಅಕ್ಕುಣಿ  ಉಟ್ಟ ಸೀರೆನ ಗುಡಿ ಹೊದ್ಕಂಡ್ ಕುದ್ದುಟು. ಕೃಷ್ಣ, ಅತ್ತೇ ಹೀಂಗ್ಯಾಕೆ  ಮಾಡ್ದರಿ?' ಎಂತಾ ಕೇಳ್ದೆ ಗೌರಿ ಓಡಿ ಹೋಗಿ ಅಯ್ಯೆನ ತೊಬ್ಬಿಕಂಡ್ ಮೊರ್‍ಪತ್.

"ಅವ್ವಾ ನನ್ನಂದ ತೊಪ್ಪಾತ್. ನೀ ನನ್ನ ಕ್ಷಮಿಸಿ ಬುಡು" ಎಂತ ಹೇಳಿ ಅಯ್ಯನ ಕಾಲ್ ಹಿಡ್ಕಂಡತ್ ಅಕ್ಕುಣಿಗೂ ಈಗ ತನ್ನ ತೊಪ್ಪು ಅರಿವಾಗುಟ್ಟು' ನಾ ಮನೆ ಬುಟ್ಟ್ದ್ ಹೋಕೆ ಆಗದಿತ್. ಎಷ್ಟಾದರ್ ಅದ್ ನನ್ನ ಕಂದ್ ಕರ್‍ಳ್ ಇದರ ಕಣ್ಣ್‌ಲಿ ನೀರ್ ತರ್‍ಸಿಕೆ ಬೊತ್ತು ಪಾಪ ಅವಿಬ್ರೊರು ನಂಗಾಗಿ ಇರ್‍ಳ್ ಇಡೀ ನಿದ್ದೆ ಮಾಡಿರಿಕಿಲ್ಲೆ ಎಂತ ನೆನ್ಸಿಕಂಡ್ ಅದುನೂ ಮೊರ್‍ಪತ್.

ಅಯ್ಯೆ ಮಗ ಒಬ್ಬಂದೊಬ್ಬ ತೊಬ್ಬಿಕಂಡ್ ಸಮಧಾನ ಮಾಡಿಕಂಡ್ ಮೊರ್‍ಪ್‌ಕಂಡ್ ಇರಿಕಾಕನ ಕೃಷ್ಣ  ಮನೆ ಒಂಳಗೆ ಬಂದ್ ಒಲೆ ಬುಡಲಿ ಕುದ್ದ್

ಬೂದಿ ತೆಗ್ಯಕೆ ಚಿಪ್ಪಿ ಸೆಡೆನ ಒಲೆಗೆ ಒಳಗೆ ಹಾಕಿಕನ ಬೂದಿ ಒಳಗೆ ನಿನ್ನೆ ಸಂತೆಂದ ತಂದ ಹಸಿ ಗೆಣ್ಸನ, ಹೆಣ್ಣ್ ಗೆಂಡಲಿ ಸುಡಿಕೆ ಹಾಕಿಸಿದ್ ಸೆಡೆಲಿ ಬಾತ್ ಗೆಂಡ ಬೂದಿ ಆಗಿ ಗೆಣ್ಸ್ ಹದ ಬೆಂದಿತ್ತ್. ಅದರ ತೆಗ್ದದ್ ಒಂದು ಅಳಗೆಗೆ ಹಾಕಿ ಸಿ ಬೂದಿ ತೆಗ್ದ್ ಸೌದೆ ಚೆರುಂಬುನ ಒಲೆಗೆ ತುರ್ಕಿಸಿ ಮಡ್ಲಿಲಿ ಕಿಚ್ಚ್ ಹೊತ್ತಿಸಿತ್. ಸೊಯ್ದೆಗೆ ಕಿಚ್ಚ್ ಹಿಡ್ಯಕಾಕನ ದಿನ ಚಾ ಮಾಡುವ ಕೀಜಿನ ಮಡ್ಕೆಗೆ ಮೂ ಪಾಟೆ ನೀರ್ ಹೊಯ್ದ್, ಮೂರು ತುಂಡು ಬೆಲ್ಲ ಹಾಕಿ ಕೊದ್ಯಕೆ ಇಸಿತ್. ಹೊರಗೆ ಕಟ್ಟಿ ಹಾಕಿದ ಏಡ್ಗಳ ಹಕ್ಕಲೆ ಹೋತ್ ಆಗ ಪಳ್ಳಂಗೆ ಬೊಳ್ಪಾಗಿತ್ತ್. ಏಡ್‌ಗಳಿಗೆ ಹಲ್ಸ್‌ನ ಸೊಪ್ಪುನ ಗೆಲ್ಲ್‌ನ ತಿಂಬಕೆ ಹಾಕಿ ಮೊರಿ ಹಾಕಿದ ಏಡ್‌ನ ಹಕ್ಕಲೆ ಹೋಗಿ ಅದರ ಒಂದು ಮೊಲೆನ ಹಿಂಡಿ ಒಂದು ಕೊಂಡೆ ಹಾಲ್ನ ಮನೆಗೆ ತಾತ್ ಒಲೆ ಮೇಲೆ ಇಸಿದ ನೀರ್ ಕೊದ್ಯತಿತ್ತ್ ಅದ್ಕೆ ಮೂರು ಸಂವುಟು ಚಾ ಹುಡಿ ಹಾಕಿ ಹಾಲ್ ಹಾಕಿ ಚಾ ಮಾಡ್ತ್. ಒಂದು ಅರ್ಪೆಲಿ ಅದರ ಅರ್ಪಿ ಅದರ್‌ಂದ ಒಂದು ಪಾಟೆ ಚಾನ ತಂದ್‌ದ್ ಅತ್ತೆಗೆ ಕೊಟ್ಟತ್. ಅವ್ವ ಮಗ ರಾಜಿ ಆಗಿ ಮೋರೆ ತೊಳ್ದ್ ತಿಣೆಲಿ ಕುದ್ದಿದ್ದೊ. ಅಕ್ಕುಣೆ ಚಾ ತಂದ್ ಕೊಟ್ಟ ಅಳ್ಯನ ಮೋರೆನನೇ ಪ್ರಿತಿಂದ ನೋಡ್ತ್ ಮಗ ದುಡ್ಕು ಬುದ್ಧಿದಾದರೂ. ಅಳ್ಯ ಮಾತ್ರ ಸಾಧು ಪ್ರಾಣಿ ಅಂವನ ಮೋರೆ ನೊಡಿ ಆದರೂ ನಾ ಮಗಳ ಮಾತ್‌ನ ಸಹಿಸಿಕಣಕಾಗಿತ್ತ್ ನಂಗೆ ಇನ್ನ್ ಏನಾಕು? ಈಗ ಅವರ ಕಾಲ ಅವು ಹೇಳ್ದಾಂಗೆ ಬಿದ್ದರುದೇ ನಂಗೆ ಸುಕ. ಅವರ ಸಂಪಾದ್ನೆಲಿ ನಾ ಕಾರ್ಬಾರ ಮಾಡ್ದು ಏಕೆ ಇನ್ನ್ ಮುಂದೆ ಮಾತ್ ಕಮ್ಮಿ ಮಾಡೊಕು. ಮಗ ಬ್ಯೊದರೆ ಉತ್ತರ ಕೊಡಿಕಾಗದ್ ನಾ ಆದರೂ ಎಲ್ಲಿಗೆ ಹೋದು? ನೀರ್ನೆ ಹಕ್ಕಲಲೆ ಸಿಟ್ಟ್ ಮಾಡ್ರೆ ಮುಕುಳಿಲಿ ಹುಳಾದುಗಡ' ಹಿರ್‍ಯರ ಗಾದೆನೇ ಉಟ್ಟು ಹಾಂಗಾಗಿ ಮಗಳ ಒಟ್ಟಿಗೆ ಸಿಟ್ಟ್ ಮಾಡ್ರೆ ನಂಗೇ ಕಷ್ಟ. ಇನ್ನ ಮುಂದೆ ಎಷ್ಟ್ ಮಗ ಬೊಯ್ದರೂ ಮನೆ ಬುಟ್ಟ್ ಹೋಕಿಲೇಂತ ಮೊನ್ಸ್‌ಲಿ ಗ್ರೇಸಿ ಅಳ್ಯನ ಕೈಯಿಂದ ಚಾ ತಕಂಡ್ ಉರ್ರಿ, ಉರ್ರಿ ಕುಡ್ಯಕೆ ಸುರು ಮಾಡ್ತ್ ಅಳ್ಯ ಕುಸಿಂದ ಒಳಗೆ ಹೋಗಿ ಸುಟ್ಟ ಗೆಣ್ಸ್‌ನ ತುಂಡುಗಳ ಒಂದು ಪಿಂಗಾಣಿಗೆ ಹಾಕಿ ಅತ್ತೆಗೆ ತಿಂಬಕೆ ತಂದ್ ಕೊಟ್ಟತ್.

* * * * *

# ಜೀವನ ಬೆಳ್ದ್ ಕಂಡತ್

**– ಬೈತೆಡ್ಕ ಜಾನಕಿ ಬೆಳ್ಯಪ್ಪ**

ಬ್ಯಾಗ ಬ್ಯಾಗ ಹೊರ್‌ಡ್‌ತೇಳ್ದ ಗಂಡನ ಮಾತಿಗೆ ತಾನ್ ತಲೆ ಬಾಚೊಳೆ ಯಿಲ್ಲೆತೇಳಿ ನೋಡದೆ ಸೀರೆನ ಸುತ್ತಿ ಹೊರ್‌ಟ ಅಚ್ಚವ್ವಂಗೆ ಪ್ಯಾಟೆ ಹತ್ರ ಬಾದು ನೋಡಿ ಹೆಂಗೆಂಗೊ ಆತ್. ಗಂಡನ ಹಿಂದೆ ಓಡೋಡಿ ಬಂದ ಅವ್‌ಳು ಅಲ್ಲಿ ಸೀಟ್ ಕಾಲಿವುಟ್ಟು ಕುದ್ದ್‌ಕ ತೇಳ್ದ ಮಾತಿಗೆ ಮಹಡಿ ಹತ್ತಿ ಉಸ್‌ರು ಮ್ಯಾಲೆ ಕೆಳ್‌ಗೆ ಆದವಳಿಗೆ ಸದ್ಯ ಕೂರಿಕೆ ಜಾಗ ಸಿಕ್ತಲ್ಲ ತೇಳಿ ಸಮಾದಾನ ಆತ್.

ಆ ನಾಡ್ ಕಚೇರಿ ಮುಂದೆ ಹೋಗಿ ಒಳಗೆ ಹೋದ ಗಂಡ ಬಾದು ಎಸ್ಟೊತ್ತಿಗೆ ಏನೋಂತೇಳಿ ಗ್ವಾಡೆಲಿ ತೂಗ್ ಹಾಕಿದ ಮಾಹಾತ್ಮರ ಚಿತ್ರಗಳ್‌ನ ನೋಡ್ತಾ ಗ್ಯಾನ ಎತ್ತೊ ಹೋಕೆ ಸುರಾತ್. ಈಗೀಗ ನಂಗೂ ವಯಸ್ಸಾಗ್ ತಾವುಟ್ಟು. ವಯಸ್‌ನ ಭಾರಂದ ಕಣ್ಣ್ ಬ್ಯಾರೆ ಮಂಜಾಗ್‌ತಾವುಟ್ಟು. ಡಾ॥ ಹತ್ರ ಹೋದರೆ ಆಪರೇಷನ್ ಅದ್‌ಯಿದ್‌ತ ಹೇಳ್ರೆ ಈಗಂತೂ ಬದ್‌ಕ್ ಸಾಕಾಗುಟ್ಟು. ಸದಾ ಕನ್ನಡಿನೆ ನಂಬಿ ಅಬ್ಬೆಸ ಆಗಿತ್ತ್. ಎಲ್ಲವರಂಗೆ ನಾನೂ ನೌಕರಿಗೆ ಸೇರಿಕಂಡಿದ್ದರೆ ನಂಗೆ ಹಣದ ತಾಪತ್ರೆ ಬರ್ತಾಯಿತ್ತ್‌ಲೆ. ನ್ನಂಗೆ ಇಷ್ಟಬಂದ ವಸ್ತ್‌ಗಳ್‌ನ ತಕಂಡ್ ಕುಸಿಲಿ ಇರಕಾಗಿತ್ತೇನೊ......ಹಂಗೆನಾದ್ರ್ ಕೆಲ್‌ಸಲಿ ಯಿದ್ದಿದರೆ ನಾನೂ ಎಲ್ಲವರಂಗೆ ನಿವೃತ್ತಿ ಆಗಿ ಪೆನ್‌ಶನ್ ತಕಣ್ತಾಯಿದ್ದೆ. ಹಿಂಗೆ ಹತ್ತಾರ್ ಗ್ಯಾನಗ ಮೋಡನಂಗೆ ಹಾದ್ ಹಾದ್ ಹೋಗ್ತಾಯಿರ್‌ಕನ ಕಣ್ಣ್‌ಲಿ ನೀರ್ ತನ್ನಷ್ಟಕ್ಕೆ ಬೀಳಿಕೆ ಸುರಾತ್. ಬಾ ಪೋಯಿ ತೇಳ್ದ

ಗಂಡನ ಮಾತಿಗೆ ಕೀಲ್ ಗೊಂಬೆ ನಂಗೆ ಹಿಂದೆ ನಡೆಕೆ ಸುರು ಮಾಡ್ತ್ ಅವ್ಳು. ಯಾಕೆ ನಾವು ಇಲ್ಲಿಗೆ ಬಂದದ್ ತೇಳಿ ಅವ್ಳಿಗಂತೊ ಗೊತ್ತೇ ಆತ್ಲೆ. ಜ್ಯಾಸ್ತಿ ಮಾತಾಡುವಂಗಿಲ್ಲೆ!

ಅಚ್ಚವ್ವ ಸಣ್ಣದರ್ಂದಲೇ ಕಷ್ಟ ಸುಕ ಎದ್ರಿಸಿದವ್ಳು. ವಿಶ್ರಾಂತಿಯಿಲ್ಲದೆ ಕೆಲ್ಸ ಮಾಡ್ತಾಯಿತ್ತ್. ತಾನ್ ಓದಿ ದರೂ ಸಹ ನೌಕರಿಗೆ ಕಳಿಸದ ಚಿಕ್ಕವ್ವ ಕೃಸಿ ಬದ್ಕ್‌ಗೆ ಬಳ್ಸಿ ಕಂಡಿತ್ತ್. ಮೊದ್ವೆ ವಯಸ್ ಮೀರ್ತಾಯಿದ್ದರೂ ಮನೆ ಕೆಲ್ಸಕ್ಕೆ ಎಲ್ಲಿ ತಪ್ಪಿ ಹೋದೆನೊ ತೇಳ್ವ ಕಾರಣದಂದಲೊ ಏನೊ ಮೊದುವೆ ಮನ್ಸ್ ಮಾಡದಸ್ಟ್ ಸಣ್ಣ ಮನ್ಸ್ ಚಿಕ್ಕವ್ವನದಾಗಿತ್ತ್. ದುಡ್ಡ್ ಸಂಪಾದನೆ ಮಾಡ್ವಸ್ಟ್ ಕಲ್ತಿದ್ದರೂ ಪ್ರಯೋಜನ ಆತ್ಲೆ. ಹೆಂಗೊ ಕೊನೆಗೊಂದು ಸರ್ಕಾರಿ ಕೆಲ್ಸಲಿರ್ವ ಗಂಡ್ನ ಹುಡ್ಕಿ ತಾತ್ ಅವಳ ಸ್ವಾದರ ಮಾಂವ. ಆಗ ಪರವಾಗಿಲ್ಲೆ ನನ್ನ ಮಾಂವಂಗೆ ನನ್ನ ಮ್ಯಾಲೆ ಅಸ್ಟ್ ಅಬಿಮಾನಯಿರ್‌ದು ನೋಡಿ ಅಳು ಬಂದ್ ಹೆತ್ತವ್ವನ ಗ್ಯಾನಾತ್.

ಗಂಡ ನೌಕರಿಲಿದ್ದರೂ ಮೊದುವೆ ಆದ ಅಚ್ಚವ್ವನ ಜೀವನ ಅಸ್ಟೊಂದು ಸುಖಿಯಾಗಿತ್ತ್‌ಲೆ ತೇಳಕ್. ಏನೆ ವಸ್ತು ತಂದರೂ ಅಂವನ ಇಷ್ಟದಂಗೆ ತರ್ತಾಯಿತ್ತ್. ಪ್ರಶ್ನೆ ಕೇಳ್ವ ಹಕ್ಕ್‌ಯಿತ್ತ್‌ಲೆ. ಅಂವನ ಸೊಬಾವನೆ ಹಂಗೆ ತೇಳಿ ಸುಮ್ಮನೆ ಇರ್ತಿತ್ತ್. ಇವಳ ಬೇಕು ಬೇಡಗಳ್ನ ಪೂರೈಸುವ ಮನ್ಸ್ ಯಿಲ್ಲದಂವಾಗಿತ್ತಂವ. ಕಾರಣ ತಾನ್ ಹಳ್ಳಿಂದ ಸೀದಾ ನಗರದ ಹೊಸಮನೆಗೆ ಬಂದವಳು ತೇಳ್ವ ಹಂಗ್ ಮಾತ್ಲಿ ಗೊತ್ತಾಗ್ತಯಿತ್ತ್. ಸದಾ ಕಸ್ಟಸುಕನ ಎದ್ರಿಸಿ ಹೊರ ಬಂದವಳಿಗೆ ಇದೇನ್ ಮಹಾ ಕಸ್ಟತ ಆತ್ಲೆ! ಅಂವನ ಹಂಗ್‌ನ ಮಾತ್ ಅಬ್ಬೆಸಾಗಿತ್ತ್. ಹಂಗಾಗಿ ತನ್ನ ಪಾಡಿಗೆ ನಾಜುಕಾಗಿ ಹೆಚ್ಚ್ ಮಾತಿಲ್ಲದೆ ಕೆಲ್ಸನ ಜವಾಬ್ದಾರಿಯಾಗಿ ಮಾಡ್ತಾಯಿದ್ದದರ್ಂದ ಅಂವನ ಕಣ್ಣುಗಳಿಗೂ ಒಮ್ಮೊಮ್ಮೆ ಕುಸಿ ಆಗ್ತಾಯಿತ್ತ್. ಹಿಂಗೆ ದಿನಕಳ್ದಂಗೆ ಮೊದಲಿಕೆ ಮಾತ್‌ಗಳ್ನ ಕಮ್ಮಿ ಮಾಡಿತ್ತ್. ಕಾರಣ ಹಿರಿಯವ್ಳು ಮಗ್ಳು ಕಿರಿಯಂವ ಹೈದ ಆಗಿತ್ತ್/ ಮಕ್ಕಳ ಮುದ್ದು ಮಾತ್ಲಿ ಇಬ್ಬೊರು ಪಾಲ್‌ದಾರರಾಗ್ತಿದ್ದೊ.

ಹಿಂದೆ ಎಸ್ಟೋ ಸಲ ಗ್ಯಾನ ಮಾಡ್ತಿತ್ತ್ ಅಚ್ಚವ್ವ ಪಕ್ಕದ ಮನೆಯವ್ಳು ನೌಕರಿ ಮಾಡಿಕಂಡ್ ಕುಸಿಲಿ ಕುದ್ದ್ ನಗಾಡಿಕಂಡೆ ಮಾತಾಡ್ತು. ಪಿಕ್‌ನಿಕ್ ದೂರ ಪ್ರವಾಸ ಸಂಸಾರ ಕೂಡಿ ಹೋದು ಎಲ್ಲಾ ಗ್ಯಾನಾಗ್ತಾಯಿತ್ತ್. ಇದೆಲ್ಲ ಅವ್ಳು ನೌಕರಿಲಿರುವುದರ್ಂದ ಆಗಿರ್‌ದುತ. ಈಗ ಅಚ್ಚವ್ವಂಗೆ ಮಗ್ಳು ಅಳಿಯ ಮಂಜ ಸೊಸೆ ಪಿಳ್ಳಿಕ (ಮೊಮ್ಮಕ್ಕ)ವಳೊ ಕುಸಿಗೆ ಕೊರ್ತೆ ಇಲ್ಲರು, ಪಿಳ್ಳೆಕಳಿಗೆ ಕುಸಿನ ಅಜ್ಜಿ ಆಗಿತ್ತ್. ಆದರೂ ಹಣಕ್ಕೆ ಕೈ ಚಾಚುದು ಬಾರಿ ಹಿಂಸೆನ ಕೆಲ್ಸ ಆಗಿತ್ತ್. ಮನೆ ಕರ್ಚಿಗೆ ಪೆನ್‌ಸನ್ ಹಣಂದ ಕೊಡುವ ಹಣ ಅವ್ಳಿಗೆ ಸಾಕಾಗ್ತಾಯಿತ್ತ್‌ಲೆ. ಜೀವನಲಿ ತನ್ನಿಷ್ಟ ಏನ್ತ ಕೇಳ್ದವು. ಯಾರೂಯಿಲ್ಲೆ. ಗಂಡ ತಂದ್ ಹಾಕುದು ತಾನ್ ಬೇಯ್ಸಿ ಹಾಕುದು ಮನೆ ಕೆಲ್ಸ ಜೀವನ ಪೂರ್ತಿ ಇದೇ ಆಗಿ ಹೋಗಿತ್ತ್.

ಅಚವ್ವಳ ಬದ್ಕ್ ಆಗ ಹಂಗಾದರೆ ಈಗ ಇನ್ನೊಂದು ಎದ್ರಾತ್.

ಮಗ್‌ಳು ಅಂತರ್ಜಾತಿ ಮೊದುವೆ ಮಾಡ್ಕಂಡ್ ದೂರದ ಬೊಂಬಾಯಿಲಿ ನೆಲ್‌ಸ್ಯುಟ್ಟು. ಯಾಗಾರ್ ಒಮ್ಮೊಮ್ಮೆ ಒಂದ್ ಕಷ್ಟ ಸುಕ ವಿಚಾರ್‌ಸಿ,ಕೈಗೆ ಸೊಲ್ಪ ದುಡ್ಡ್ ಕೊಡ್ತಾಯಿತ್ತ್. ಆದರೆ ಬಂದ ಸೊಸೆ ನೊಟ್ಟಿಗೆ ಹೊಂದಿ ಕೊಂಬೊದು ಗಂಡನ ಹಂಗ್ಸುದಕ್ಕಿಂತ ಕಷ್ಟ ಆತ್. ತಾನೆ. ಎಲ್ಲಾ ಕೆಲ್‌ಸ ಮಾಡ್‌ರೂ ಒಂದು ದಿನನೂ ಪ್ರೀತಿ ವಿಶ್ವಾಸ ಗೌರವ ತೋರುವ ಹಂಗಿತ್ತ್‌ಲೆ. ಸೊಸೆನ ಒಂದು ಕಣ್ಣ್ ಯಾಗೊಳೂ ಅಚ್ಚವ್ವನ ಪ್ರಶ್ನೆ ಮಾಡುವಂಗಿತ್ತ್. ಮನ್ಸ್‌ನ ಧೈರ ಕಮ್ಮಿ ಮಾಡ್ತಾಯಿತ್ತ್. ಚಿಂತೆಲೆ ಅವ್‌ಳಿಗೂ ಎಲ್ಲವರಂಗೆ ಬಿಪಿ ಶುಗರ್ ಕಾಯಲ ಎಲ್ಲ ಸುರಾತ್. ಮತ್ತೇನೆನೊ ತೊಂದರೆಗ ಸುರಾದೊ. ಶರೀರಕ್ಕೆ ವಿಶ್ರಾಂತಿ ಮತ್ತೆ ಮನ್‌ಸಿಗೆ ನೆಮ್ಮದಿ ತಂದ್‌ಕಣಿಕೆ ಡಾಕ್ಟರ್ ಸಲಹೆನು ಬಾತ್. ಗಂಡಂಗೂ ವಯಸಾದರ್‌ಂದ ಅಂವನ ನೋಡಿಕೆ ತೇಳಿ ಇವ್ಳುಗೇನ್ ಕಾಯ್ಲುಯಿಲ್ಲೆತೇಳಿ ಅಡ್‌ಂಗ್‌ಸ್ ತಿತ್ತ್.

ಅವಳ ಶರೀರಕ್ಕೆ ಏನ್ ತೊಂದರೆ ತೇಳ್ಳುದ್ಗೊತ್ತಿತ್ತ್. ಅನಾರೋಗ್ಯತ ಹೇಳಿಕಂಡೆ ಕೆಲ್ಸ ಮಾತ್ರ ನಡಿತಾಯಿತ್ತ್. ಒಮ್ಮೆ ಯಾರೊ ನೆಂಟ್ರ್ ಅಚ್ಚವ್ವನ ನೋಡಿಕೆ ತೇಳಿ ಬಂದೊ. ಆಗ ಸೊಸೆ ಅತ್ತೆ ಮನೆಲಿಲ್ಲೆ ಎಲ್ಲಿ ತಿರ್‌ಗಿಕೆ ಹೋಗುಟ್ಟೊ ಏನೋ ತೇಳಿ ಮೊಕಕೆ ಹೊಡ್‌ದಂಗೆ ಹೇಳ್ದ್ ಕೇಳಿ ನೆಂಟ್ರ್ ಅಲ್ಲಿ ನಿಲ್ಲದೆ ಹೋದವು ಮತ್ತೆ ಯಾರೂ ಇವ್‌ಳ್‌ನ ವಿಚಾರ್‌ಸೊವು ಬಾತ್‌ಲೆ. ಹಿಂಗೆ 2–3 ಸಲ ಆದ ಮ್ಯಾಲೆ ಸಂಬಂದಿಕರೆಲ್ಲ ದೂರ ಆದೊ. ಎಲ್ಲಾರ್ ಕಂಡರೆ ಕರುಣೆಂದ ನಿನ್ನ ಸ್ಥಿತಿ ಹಿಂಗಾತಲಾತೇಳಿ ವಿಚಾರಿಸ್ತಿದ್ದೊ. ಅಚ್ಚವ್ವ ಯಾಗೊಳೂ ಬಂದವರ್‌ನ ಹಂಗೆ ಕಳ್‌ಸ್ತಾಯಿತ್ತ್‌ಲೆ. ಹಂಚಿ ಉಣ್ಣೊಕು ತೇಳ್ದೊರ್‌ನ ಅವ್‌ಳ್ ಗುಣಂದ ತೋರ್‌ಸ್ತಿತ್ತ್.

ಅಂತೂ ಒಂದು ವಾರ ಕ್ವಾಂಬರೆಲಿ ಮಲ್‌ಗಿ ಸಾಕಾಗಿ ಹೊರಗೆ ಹೋಗಿ ತಿರ್‌ಗಾಡಿ ಬನ್ನೆತ ಮೆಲ್ಲಂಗೆ ನಡ್ದ್ ತ್ವಾಟಕೆ ಬಾತ್. ಬಂದ್ ನೋಡ್‌ಕನ ಅವಳ ಹೊಟ್ಟೆ ಉರ್‌ದೋತು. ತಾನೆ ಕಸ್ಪ ಪಟ್ಟ್ ಎಳ್ಳಿ ಗೊಬ್ಬರ ಹಾಕಿ ನೀರ್ ಹೊಯ್ದ್ ಬೆಳ್‌ಸಿದ ತರಕಾರಿ ಗಿಡಗಳ್‌ನೆಲ್ಲ ಆಡ್‌ಗ ಬಂದ್ ತಿಂದ್ ನೋಡಿಕೆ ಬೊತ್ತದಾತ್.

ಆ ತ್ವಾಟಲಿ ಎಂತದೆಲ್ಲ ಬೆಳ್ಸಿದ್ದೆ ಒಂದಲ್ಲ ಎರಡಲ್ಲ ಬದ್‌ನೆ, ಟೊಮೆಟೊ, ಮೆಣ್‌ಸ್, ಸಂಬಾರ ಸೊಪ್ಪು, ಮೆಂತೆ ಸೊಪ್ಪು ಯಾಗೊಳು ಇರ್ತಿತ್ತ್. ಸಂತೆಗೆ ಹೋಗ್‌ವ ಕೆಲ್‌ಸ ಯಿತ್ತ್‌ಲೆ. ಆ ಕೆಲ್‌ಸಂದ ವಯ್‌ಸಾದ ಗಂಡಂಗೆ ಸಮಯ ಕಳಿವ ಅವ್‌ಕಾಸ ನೆಮ್ಮದಿಯಿತ್ತ್.

ಬಾಳ ವರ್ಸಗಳ ಮ್ಯಾಲೆ ಮಗಳ ಮಗ್‌ಳಿಗೆ ತೇಲ್ರೆ ಹಿರಿ ಪಿಳ್ಳೆಗೆ ಗಂಡ್ ನೋಡಿಕೆ ಯಾರೊ ಇತ್ತನವ್ ಬಂದವೆತೇಳಿ ಅವರ್‌ನ ನಿಮಿಗೂ ಗೊತ್ತುಟ್ಟುತೇಳಿ ತಕ್ಷಣ ನೀವು ಹೊರ್‌ಟ್ ಬನ್ನಿತ ಅಳಿಯ ಫೋನ್ ಮಾಡ್ದ್ ನೋಡಿ ಮಾಣ್ ದಿನನೆ ಹೊತಾರೆನ ಬಸ್ಸ್‌ಗೆ ಹೊರ್‌ಟೊ. ಆಗಾಗ ಇಳಿಯಕೆ ಸುಲ್‌ಬ ಆದೆತ ಮೂರ್‌ನೆ ಸೀಟ್ ಹಿಡ್ದ್ ಗಾಳಿ ಸೆರಿವುಟ್ಟಾ ತೇಳಿ ನೋಡಿಕುದ್ದೊ. ಕುದ್ದ್‌ಮ್ಯಾಲೆ ಅಜ್ಜಿನ ಗ್ಯಾನ ಪಿಳ್ಳಿನ ಮ್ಯಾಲೆ ಹೋತು. ಗ್ಯಾನ ಮಾಡಿಕೆ ಸುರುಮಾಡ್‌ತ್. ಈಗ ಕೂಸು ಹೆಂಗಿರ್‌ದು?

ನೋಡಿಕೆ ಲಾಯ್‌ಕಾದ ಗೂಡೆನೆ ಆಗಿರ್‌ದು. ಕೂಸು ಇಲ್ಲಿಗೆ ಬಾಕನೆ ಪೊರ್ಲಾಗಿಯಿತ್ತ್. ಈಗಂತೂ ಡಾಕ್ಟ್ರ ಓದ್ತಾವುಟ್ಟುಗಡ. ಓದಿ ಮುಗ್‌ದ ಮ್ಯಾಲೆ ಮೊದುವೆ ಮಾಡ್‌ದು ತೇಳಿ ಮಗ್‌ಳ್ ಹೇಳ್ತಿತ್ತ್. ಇದೇನ್ ಇಷ್ಟ್ ಅವ್‌ಸರಲಿ ಆಗ್ತಾವುಟ್ಟುತ ಹಂಗೆ ಹಿಂಗೆ ಗ್ಯಾನಲೆ ಮುಳ್‌ಗಿರ್‌ಕಾಕನ ಗೂಡೆಗೆ ಎಂತ ಕೊಡ್‌ದು ತೇಳಿ ಚಿನ್ನಕ್ಕೊಂದು ದುಬಾರಿ ಬೆಲೆ ನಂಗೂ ಹಣಕಾಸ್ ಜೋಡ್ಸಿ ಏನಾರ್ ಕೊಡೊನ ತೇಳ್ರೆ ಸೊಸೆನ ಗಿಡ್‌ಗನ ಕಣ್ಣ್ ಪಾರ ಕುದ್ದಂಗಿತ್ತ್. ಎಲ್ಲಿ ಮಗಳಿಗೆ ಎಲ್ಲದರ್‌ನ ಸಾಗ್ಸಿ ಬುಟ್ಟದೇನೊತ ಆತಂಕಯಿತ್ತ್ ಹಿಂಗಾಗಿ ತಾನ್ ಮಗಳ ಸಂಸಾರದ ಬಗ್ಗೆ ಎಂದೂ ಯಾರೊಟ್ಟಿಗೆನೂ ಮಾತಾಡ್ತಾಯಿತ್ತ್‌ಲೆ. ಮಗ್‌ಳ್ ಬ್ಯಾರೆ ಅಂತರ್ಜಾತಿಯಂವನ ಮೊದುವೆ ಆದವ್‌ಳುತ ಕಡೆಗಣಿಕೆ ಬ್ಯಾರೆ.!

ಹಿಂಗೆ ಗ್ಯಾನಲಿ ಮುಳ್‌ಗಿದ್ದ ಅಚ್ಚವ್ವಂಗೆ ಊಟಕ್ಕೆ ಬಸ್ಸ್ ನಿಲ್‌ಸ್‌ಕನೆ ಎಚ್ಚರಾದ್ದ್ ! ಗಂಡ ಒಟ್ಟಿಗೆ ಇದ್ದದರ್‌ಂದ ಇಳಿವ ಕೆಲ್‌ಸಯಿಲ್ಲೆ. ಏನಾರ್ ತಂದರೆ ತಿಂಬೊದುತ ಪಕ್ಕದ ಸೀಟ್‌ಲಿ ಕುದ್ದ ಹೆಂಗ್ಸ್‌ನ ಮೊಕನೋಡ್ತ್ ಯಾಕೊ ಇನ್ನೊಮ್ಮೆ ನೋಡೊನತಾತ್. ಎಲ್ಲೊ ನೋಡ್‌ದ ನೆನಪು ಹೌದು! ಇವ್‌ಳು ನಮ್ಮೂರ್‌ನ ಜಯಲಕ್ಷ್ಮೀನ ಹಂಗೆ ಕಂಡದೆಲ್ಲಾ ಸ್ವಲ್ಪ ದಪ್ಪ ಆಗುಟು. ನೋಡಿಕು ಮುಂದೆಗಿಂತ ಲಾಯಕ್ ಕಾಂಬತಿತ್ತ್. ಅವ್‌ಳು ಬೆಂಗ್‌ಳೂರ್‌ಲಿ ಯಾರ್‌ನೊ ಮೊದುವೆ ಆತ್‌ತ ಹೇಳ್ತಿದ್ದೊ. ಹಂಗಾಗಿ ಅವಳ್‌ನ ನಾನ್ ಕಂಡತೇಲೆ. ನಿಜ ಅವ್‌ಳೆ.!

ಅವ್‌ಳು ಅಚ್ಚವ್ವನ ಬಾಡ್‌ದ ಮೊಕಕಂಡ್ ಮಾತಾಡಿಕೆ ಸುರುಮಾಡ್ತ್. ನೀವ್‌ಗೆ ನನ್ನ ಗೊತ್ತಾತ ನೀವು ಎತ್ತ ಹೊರ್‌ಟರಿ? ಮಕ್ಕಳಿಗೆ ಮೊದುವೆ ಆತಾ? ಮಕ್ಕ ಏನ್ ಮಾಡ್ಕಂಡ್ ವಳೊ. ಈಗ ಆರಾಮಾಗಿ ವಳರಿ ಅಲಾ. ಹಿಂಗೆ ಹತ್ತಾರ್ ಪ್ರಶ್ನೆಗಳ್‌ನ ಒಮ್ಮೆಗೆ ಕೇಳ್ತ್. ಅವುಳು ಸಹ ಅಚ್ಚವ್ವನ ಗುರುತ್ ಹಿಡ್‌ದಿತ್ತ್. ಪ್ರಶ್ನೆಗಳನ ಕೇಳ್ತಾ ಕುದ್ದಿದ್ದ ಅಚ್ಚವ್ವ ಚುರ್‌ಕಾತ್. ದಾರಿ ಸಮ್‌ದದೇ ಗೊತ್ತಾತ್‌ಲೆ. ಗಂಡ ನಿದ್ದೆ ಮಾಡ್ತಾಯಿದ್ದದರ್‌ಂದ್ ಮಾತಾಡಿಕೆ ಕಷ್ಟ ಆತ್‌ಲೆ. ನೆಗಾಡಿಕಂಡೆ ಮಾತಾಡ್‌ದ ಅವ್‌ಳ ಬಗ್ಗೆ ಏನಾರ್ ಕೇಳೊನತಾತ್. ಬೆಂಗಳೂರ್‌ಲಿ ಮದುವೆ ಆದ್ದ್ ನೆನ್‌ಪಾಗಿ ಎಲ್ಲಿ ವಳರಿ ...... ಗಂಡ ಮಕ್ಕ ಎಂತ ಮಾಡ್ತಾವಳೋತ ಕೇಳ್‌ದಕ್ಕೆ – ಅಮ್ಮಾ ನಂಗಿನ್ನೂ ಮಕ್ಕಳೇ ಆತ್‌ಲೆ ತೇಳ್‌ವ ಕೊರ್‌ತೆ ಬುಟ್ಟರೆ ಬ್ಯಾರೆ ಎಂತದೂಯಿಲ್ಲೆ. ಬಹುಶಃ ಅಪ್ಪವ್ವಂಗೆ ಇಷ್ಟಯಿಲ್ಲದ ಮೊದುವೆ ಏನ್ ಮಾಡ್‌ದು ಕುದ್ದ್ ತಿಂಬಸ್ಸ್‌ವುಟ್ಟು. ಗಂಡಂಗೆ ಅವಂದೇ ಆದ ಕಾರ್ಖಾನೆಲಿ ನೂರಾರ್ ಜೆನ ಕೆಲಸ ಮಾಡುವೆ. ನಾನ್ ಸಮಾಜ ಸೇವೆ ತೇಳ್ವ ಬದ್‌ಕ್ ತಕಂಡ್ ಹಿಂಗೆ ಸುತ್ತ್‌ತಾವಳೆ. ಹಂಗೆ ನನ್ನ ಮನ್ಸ್‌ನ ದುಕ್ಕನ ಮರಿತಾವಳೆತ ಹೇಳ್ತ್. ಇದರ್‌ನ ಕೇಳ್ದ ಅಚ್ಚವ್ವಂಗೆ ತನ್ನ ಕಷ್ಟ ಏನೂ ಅಲ್ಲ ಕೇಳಿ ಕಣ್ಣ್ ನಿಧಾನಾಗಿ ಮುಚ್ಚಿಕಂಬಕೆ ಸುರಾತ್. ಹಂಗೆ ಪಾಪತ ಗ್ಯಾನ ಮಾಡ್ಕಂಡ್ ಕುದ್ದ ಅಚ್ಚವ್ವಂಗೆ ಅಯ್ಯೊ ನನ್ನ ಕೈಲಿ ದುಡ್ಡಿಲೆ ತೇಳ್ವ... ಚಿಂತೆ – ಇವ್‌ಳಿಗೆ ಎಲ್ಲಾಯಿದ್ದ್ ಮಕ್ಕಯಿಲ್ಲೆ ತೇಳ್‌ವ ಚಿಂತೆ.

ಪಿಳ್ಳಿಗೆ ಚಿನ್ನ ಮಾಡ್ಸೊನ ತೇಲ್ದಕ್ಕೆ ಗಂಡ – ಅದ್‌ಕಿನ್ನೂ ದಿನ ವುಟ್ಟಲ್ಲಾ ನನ್ನ ಪೆನ್‌ಶನ್‌ಲಿ ಸೊಲ್ಪ ತೆಗ್ದ್ ಮಡ್‌ಗ್ಯೊಳೆತ ಹೇಳ್ತ್. ಆದರೂ ಇವ್‌ಳಿಗೆ ಸಮಾಧಾನಯಿಲ್ಲೆ. ನನ್ನ ಜೀವನಯಿಡೀ ಬಾಡ್‌ದ ಮೊಕಲೆ ಕಳ್ತ್. ಒಂದು ಕುಸಿಯಿಲ್ಲೆ –ಸರಿಯಾಗಿ ನೆಗಾಡ್‌ದೆ ನಂಗೆ ಗ್ಯಾನ ಬಾದುಲೆ ಅಂತ ಒಂದು ಬದ್‌ಕ್‌ನ ಕಳ್‌ದೆ. ದೇವರೆ ಯಾವ ಹೆಣ್ಣಾದರೂ ಸರಿ ಸೊಲ್ಪ ಅದೃಷ್ಟನ ಪಡ್‌ಕಣಕು ತೇಳ್ತ್‌ಮನ್ಸ್. ಗ್ಯಾನ ಮುಂದುವರಿತನೆಯಿತ್ತ್. ಹೇಳ್‌ದಂಗೆ ನನ್ನ ಹತ್ರನೆ ಸೊಲ್ಪ ಚಿನ್ನವುಟ್ಟಲ್ಲಾ – ಆದರೆ ಅದ್ ನನ್ನವ್ವಂದ್ ಹೇಳ್‌ದಂಗೆ ಹಳೆಕಾಲದ ಚಿನ್ನ ಗ್ಯಾನ ನಿತ್ತತ್. ಅಷ್ಟೊತ್ತಿಗೆ ಇವರ್‌ನ ಕಾಯ್ತಾಯಿದ್ದ ಮಗಳ ಮನೆಯವರ ದಂಡ್ ನಿತ್ತಮನೆ ಮುಂದೆ ಬಂದ್ ತಲ್‌ಪಿದೊ – ಪ್ರೀತಿಯ ಸ್ವಾಗತ ಆತ್. ಪಿಳ್ಳಿಕತೇಲ್ರೆ ಸಣ್ಣವು ಅಲ್ಲ. ಸುಮಾರ್ ಸಮೆಯ ಆಗಿತ್ತ್. ಬೆಳ್ದ್ ಉದ್ದಕ್ಕೆ ನಿತ್ತ ನೆಗಾಡಿಕಂಡ್ ಓಡಿ ಬಂದ್ ಎದ್‌ರಿಗೆ ನಿತ್ತ 2 ಗೂಡೆಗಳ ಕಂಡ್ ಅಜ್ಜವ್ವಂಗ್ ಕುಸಿನೊ ಕುಸಿ. ಗಂಡ ಅಳಿಯನೊಟ್ಟಿಗೆ ಮಾತಾಡಿಕೆ ಸುರುಮಾಡ್ತ್. ತಕ್ಷಣ ಆ ಗೂಡೆಗ ಕಾಲಿಗೆ ಬಿದ್ದ್ ಮೂರ್‌ಸಲ ನಮಸ್ಕಾರ ಮಾಡ್ದ್ ನೋಡಿ ಅಜ್ಜವ್ವಂಗೆ ಹೆಂಗೆಂಗೊ ಆತ್. ಆಗ ಮನ್ಸ್‌ಲಿ ಪರವಾಗಿಲ್ಲೆ. ಓದ್ತಾಯಿದ್ದರೂ ಒಂದಿಷ್ಟ್ ಹಾಂಕಾರಯಿದ್ದಂಗೆ ಕಾಂಬೊದುಲೆತಾತ್. ಆಗ ದೊಡ್ಡ ಗೂಡೆ ಕೇಳ್ತ್ – ಅವ್ವ ನಂಗೆ ಎಂತದ್ ತಂದೊಳ ನನ್ನ ಮಾದುವೆಲಿ ನೀನ್ ಏನೂ ಕೊಡದಿದ್ದರೂ ಆದೆ. ಆದರೆ ನಿನ್ನ ಹತ್ರಯಿರುವ ಆ ಹಳೆಕಾಲದ ನಿನ್ನವ್ವನ 5 ಎಳೆ ಗುಂಡ್‌ನ ಸರ ಮಾತ್ರ ನಂಗೆ ಕೊಟ್ಟರೆ ಸಾಕ್ ತೇಳ್‌ಕನ ಸಮಾಧಾನನೂ ಆತ್. ನನ್ನ ಪಿಳ್ಳಿ ನಮ್ಮ ತರನೆ ಪದಿಸ್ಸನೆಲ್ಲ ಕಲ್‌ತುಟ್ಟು ಮಗ್‌ಳು ಬ್ಯಾರೆ ಜಾತಿಯಂವನ ಕಟ್ಟಿಕಂಡತ್‌ತ ಜನ ಹೇಳ್ದು ಕಣ್ಣೆದ್‌ರ್ ಬಾತ್. ನನ್ನ ಮಗ್‌ಳು ಮಕ್ಕಳಿಗೆ ನಮ್ಮ ಸಂಸ್ಕೃತಿನ ಕಲ್‌ಸ್ಸುಟ್ಟು. ಇಲ್ಲರೆ ಇಸ್ಟ್ ಓದಿರು ಸನ ಇವ್‌ಳ್ಯಾಕೆ ಹಳೆ ಸರ ಬೇಕುತ ಕೇಳ್ತಾವುಟ್ಟು. ತೇಳ್‌ಕಂಡ್ ಕುಸಿಲೆ ಇರ್‌ಕನ ಡಾ. ಓದುವ ಗೂಡೆ ಅವಳ ಆರೋಗ್ಯದ ಬಗ್ಗೆ ಪರೀಕ್ಷೆ ಮಾಡಿ ಟಾನಿಕ್ ಮಾತ್ರೆ ಬರ್ದ್ ಕೊಡ್ತ್.

10 ದಿನ ಮಗಳ ಮನೆಲಿದ್ದ್ ವಾಪಸ್ ಬಂದ ಅಜ್ಜವ್ವಂಗೆ ಒಂದು ಕಾಗದ ಕಾಯ್ತಾಯಿತ್ತ್. ಓದ್‌ಕನ ಗೊತ್ತಾತ್. ಅವ್‌ಳು ಪ್ರತಿತಿಂಗ ಕಟ್ಟಾಯಿದ್ದ ಕಂತ್‌ನ ಸ್ಕೀಮ್ ಹಣಕ್ಕೆ ಲಾಟರಿ ಬಂದಿತ್ತ್. ಸುಮಾರ್ 20 ಗ್ರಾಂ ಚಿನ್ನದ ಚೈನ್ ಲಾಟರಿಲಿ ಬಂದ್ ನೋಡಿ ಕುಸಿ ಆತ್. ಚಿನ್ನದ ಸಮಸ್ಯೆ ಬಗೆ ಹರ್ತ್.

ನಂಗೆ ಈಗ ವಳ್ಳದಾಗ್ತಾವುಟ್ಟು ತೇಳ್ಳಂಡಿದ್ದಂಗೆ ಆಚೆ ರೂಮುಂದ ಅತ್ತೆ ಮಾಂವ ಬನ್ನಿ ಊಟಕ್ಕೆ ತೇಳ್ದ ಸೊಸೆಗೆ ಅತ್ತೆ ಮ್ಯಾಲೆ ಎಲ್ಲಿಲ್ಲದ ಪ್ರೀತಿವುಕ್ಕಿ ಬಾತ್. ಅತ್ತೆನ ತಳಮಳ ತಿಳಿಯದ ಸೊಸೆ (ಹೆಂಗೂ ಸರನಂಗೆ ತಾನೇ) ಎಲ್ಲಿಲ್ಲದ ಪ್ರೀತಿ ಹುಟ್ಟಿದ್ ಕಂಡ್ ಅಜ್ಜವ್ವಂಗೆ ಮನ್ಸ್‌ಲಿ ನೆಗೆ ಬಾತ್.

* * * * *

# ಮಳೆಹಕ್ಕಿ

- ವಿದ್ವಾನ್ ಟಿ.ಜಿ ಮುಡೂರು

ಬಾತಿಲ್ಲೆ ಇನ್ನ್ ಕಡಲಾಚೆ ಹಾರಿ ಮಳೆತಾಕೆ ಹೋದ ಹಕ್ಕಿ
ಬರದೂರಿಲವ್ವನ ದಿನಕಾದ್ ಕರ್ದವೆ ಎಳಮರಿಗ ಬಿಕ್ಕಿ ಬಿಕ್ಕಿ

ಹೋಗುಟ್ಟು ಅಪ್ಪ ಮೂಡಗಟ್ಟನ ಹತ್ತಿ ತಾಕೆ ಜತೆ ಊಟೆದೆತ್ತ್
ಬಾತಿಲ್ಲೆ ಅವ್ವ ತಾತಿಲ್ಲೆ ಅಪ್ಪ ಹನಿಮಳೆಯ ಜತೆ ಊಟೆಯೆತ್ತ್

ಬರದ ಊರಿಡೀ ಗುಳೆ ಎದ್ದ್ ಹೊರಟವೆ ಜನ ಯಾತ್ರೆ ಪ್ರಾಣಿ ಪಕ್ಷಿ
ಉಂಡವರ ಮನೆ ಹಿಂದೆ ಬಿಸುಟೆಂಜಲೆಲೆಗಳ ಕಣ್ಣಲಿ ನೆಕ್ಕಿ ನೆಕ್ಕಿ

ಎಲ್ಲಿ ಒಳನೊ ಅವ್ವ ಹೇಂಗೆ ಒಳೊನೊ ಅಪ್ಪ ಯಾಗ ತಂದವೆಯೊ ಮಳೆ ಎತ್ತ
ಯಾಗಬಂದವೆಯೊ ಈ ನೆಲದ ಜನ ಬರದೂರ ನೆನಪ ಹೊತ್ತ

ಕಡಲ ಸುನಾಮಿ ತೆರೆಗ ನದಿಗಳುಕ್ಕುಕ್ಕಿ ನೆರೆ ನೀರ್ ನೀರೇ ಸುತ್ತು ಮುತ್ತು
ನೆರೆಊರ್ ಮುಳುಗಿದರ್ೀ ಬರದೂರ ಬಾಯ್ಗಿಲ್ಲ ಮಳೆಹನಿಯ ಒಂದ್ ತುತ್ತು

ಬೆಳದಿಂಗ ಹೊದ್ದ್ ಬಾನಿಂದ ನೆಲಕಿಳಿದ್ ಅಜ್ಜಪ್ಪ ಪಿಳ್ಳೆಗಳ ಕಣ್ಣೊರೆಸಿದ
ಊರುಗೋಲನೆ ಊರಿ ನಡೆದ್ ಊಟೆಯ ಮಾಡಿ ಉಡಿತುಂಬಿ
ಹಿಡಿ ಬೀಜಗಳ ಬಿತ್ತಿದ

ಹೆಜ್ಜೆ ಹೆಜ್ಜೆಗೆ ಊರುಗೋಲು ಗುರ್ತುಗ ಮೊಳೆತ್ ಮಳೆಬಾತ್
ಬರದ ನೆಲ ಚಿಗುರಿ ಹಸುರಾತ್
ನಿದ್ದೆ ಮುಗಿದೆದ್ದ ನೀ ನಾಳೆ ನೋಡಕ್ ಮಂಜ ಅಜ್ಜವ್ವನ ಕತೆ ಮುಗಿತ್ -
ಮಗ್ ಮಲಗಿತ್

* * * * *

# ಕುಡಿಮಿಂಚ್

– ಕಾಜಾಣ (ವಿದ್ವಾನ್ ಟಿ.ಜಿ ಮುಡೂರು)

'ಕುಡಿಮಿಂಚು' ಕಾಜಾಣ ಕಾವ್ಯನಾಮಲಿ ಮುಡೂರು ಹಿಂದೆ ಬರೀತಿದ್ದ ಚುಟುಕಗ ಇಂದಿನ ಪುತ್ತೂರು ಸುದ್ದಿಬಿಡುಗಡೆ ದಿನ ಪತ್ರಿಕೆನ 29 ವರ್ಸಗಳ ಹಿಂದಣ ಅದರ ಮೊದಲ ಸಂಪುಟ ಸಂಚಿಕೆಗಳಲಿ ಬಾತಿತ್ತ್. ಅವುಗಳಲಿ ಐದ್ ಮಿಂಚ್‌ಗಳ ಅರೆಬಾಸೆಲಿ ಕೊಟ್ಟೊಳೊ – (ಸಂ)

೧

ಚುಟುಕ ಕವಿ ಸರದಾರ ದಿನಕರನು ದೇಸಾಯಿ
ಹಿಂದೆ ದಿನ ಹಿಡಿತಿದ್ದ ಕಡಲ ಬೂತಾಯಿ
ಅವ್ನ ಕೈಲಿತ್ತ್ ಬರೇ ನಾಲ್ಕ್ ಮೊಳ ಗಾಳ
ಆದರ್ೀ ಅದ್ ಇಳಿತಿತ್ತ್ ಕಡಲಾಳ

೨

ಮೊದ್ವೆ ಹೆಣ್ಣಿನ ಬುಟ್ನೆ ಬೈನೆ ಹೆಂಡನ ಬುಟ್ನೆ
ಬುಡ್‌ಕಿಲ್ಲೆ ಕನ್ನಡಕೆ ನಾ ಪ್ರಾಣ ಕೊಟ್ನೆ
ಹೇಳ್ತ್‌ಗಡ ರತ್ನ ನಾ ಗೌಡ ಬುಡ್‌ಕಿಲ್ಲೆ ಅರೆಬಾಸೆ
ಹೆಂಡ ಹೆಣ್ಣಿನ ಜತೆಗೆ ನನ್ನ ಹುರಿ ಮೀಸೆ

೩

ಹೇಂಗೊಳರಿ ಬಾವ ಹೇಳೊಕು ಸಮಾಚಾರ
ಹೇಂಗುಟ್ಟು ಈಗ ಮಂಜನ ಕಾರುಬಾರ?
ಹೇಂಗೆ ನಡೆದದೆ ಹೇಳಿ ಅಳಿಯನ ಸುದ್ದಿ
ಸರ್ತ ಮಾಡಿಕೆ ಬತ್ತ್ ನಾಯ್ಬಾಲ ಗುದ್ದಿ

೪

ಏ ಗೂಡೆನಯ್ಯೆ ಕೇಳಿನೆ ನಿನ್ನ ಮಾತ್
ಯಾಕೇಳ್ ನೀ ಹೊಯ್ದ ದೋಸೆಗೆ ನೂರ್‌ತೂತ್
ಯಾಕಂತ ಹೇಳೊಕೊ? ನಾ ಪೊರ್ಲ್ ಹೆಣ್ಣ್
ಆಚೆಮನೆ ಹೈದ ಹಾಕಿದೆ ನಿಮ್ಮ ಕಾವಲಿಗೆ ಕಣ್ಣ್

೫

ಆ ಗೂಡೆ ಪಾಕ ಶಾಸ್ತ್ರಲಿ ಪಿ.ಯಚ್.ಡಿ
ಕೇಳಿದೆ ಹೇಂಗಜ್ಜಿ ಹಸಿ ಸೋಂತೆ ಪಚಿಡಿ
ಬೊಕ್ಕ ಬಾಯಜ್ಜಿ .... ನಿನ್ನ ಕಾಲೇಜು ದಂಡ
ಮೊದುವೆ ಆಗಲಿ ಕಲಿಸುವ ನಿನ್ನ ಗಂಡ

# ಆಟಿ ತಿಂಗ

– ಎಂ.ಜಿ. ಕಾವೇರಮ್ಮ

ಅರೆಬಾಸೆ ಜನಂಗಳ ಬೊದ್ಕ್‌ಲಿ ಬಾವ
ಹನ್ನೆರ್ಡ್ ತಿಂಗಳ್‌ಲಿ ಆಟಿತಿಂಗ
ಜಿರಿ ಜಿರಿ ಮಳೆಲಿ ದುಡ್ಯವ ಮ್ಯೊಂಸಂಗೆ
ಬೊದ್ಕಿಕೆ ಆದೆ ಬಾಳ ಬಂಗ

ದುಡ್ಯವ ಕೈಗಳ್ಗೆ ಕೆಲ್ಸನು ಇಲ್ಲೆ
ಹೊಟ್ಟೆಗೆ, ಬಟ್ಟೆಗೆ ಸಾಕಾದುಲ್ಲೆ
ಕಾಡ್ ತಿನ್ಸ್‌ನ ತಿಂದಾವೆ ಜನಂಗೆಲ್ಲ
ಬೊದ್ಕಿಕೆ ಬೇರೆ ದಾರಿನು ಇಲ್ಲೆ.

ಕೆಸನ ಸೊಪ್ಪು, ದಂಟ್‌ಗ ಎಲ್ಲ
ಆಟಿ ತಿಂಗಳ್‌ಲಿ ತಿಂದ್ ಮುಗ್ಸುವೆ
ಕಣಿಲೆ ಅಳಂಬು ಸಿಕ್ಕಿರೆ ಜನಂಗ
ಗೈಪು ಮಾಡಿದ್ ತಿಂದಾವೆ.

ಉಪ್ಪುಲಿ ಹಾಕಿದ ಹಲ್ಸ್‌ನ ತೋಳೆ
ಒಣ್‌ಂಗೆಲ್ ಗೆಣ್ಸ್, ಬೊಳ್ಳುನ ಕಾಪಿಗೆ
ಹಿಂದೆನ ಜನಂಗಳ ತಿನ್ಸದ್ ನೋಡಿ
ಈಗನ ಜನಕೆ ತಿಂದ್ ಗೊತ್ತಿಲ್ಲೆ.

ಹಲ್ಸ್‌ನ ಹಪ್ಪಳ, ಗೆಣ್ಸ್‌ನ ಬಾಳಕ
ಮಕ್ಕಳಿಗದ್‌ನೇ ತೊಡು ತಿನ್ಸ್
ಈಗನ ಮಕ್ಕ ಮೂಸಿನು ನೋಡಿಕಿಲ್ಲೆ
'ನೂಡಲ್' ತಿಂಬ ಜನಂಗವು

ಅಟ್ಟಲಿ ಅರಿಂಟಿ ಚೆನ್ನಮಣೆ ತೆಗ್ದ್
ಆಟಿ ತಿಂಗಳ್‌ಲಿ ಆಟ ಆಡಿವೆ.
ಒಂದೊಂದು ಮಡೆಲಿದ್ದ ಏಳೇಳ್ ಗುಳಿಗಳ
ಮಂಜೊಟಿ ಕಾಯಿಂದ ತುಂಬುಸುವೆ.

ಮನೆ ಜನಂಗೆಲ್ಲ ಚೆನ್ನಮಣೆ ಆಟಲಿ
ಆಟಿನ ಕಳ್ದವೆ ಬಾರಿ ಪೊರ್ಲುಲಿ
ಆಟಿ ತಿಂಗಳ್‌ಲಿ ಮೊದ್ರಂಗಿ ಇಸುವೆ
ಕೈಗಳ ತಲೆನಾ ತೊಂಪು ಮಾಡುವೆ

ಮನೆ ಮನೆ ಕೊಣ್ಕಂಡ್ ಕಳಂಜನು ಬಂದದೆ
ಜನಂಗೆಲ್ಲ ನೋಡಿ ಕುಸಿ ಪಟ್ಟವೆ
ದುಡ್ಡುನು ಕೊಟ್ಟವೆ, ಬತ್ತನು ಕೊಟ್ಟವೆ
ಹಾಕಿಕೆ ಹೊದ್ಯಕೆ ಅರ್ವೆನು ಕೊಟ್ಟವೆ.

ಪೂಜೆನು ಮೊದುವೆನು ಆಟಿಲಿ ಇಲ್ಲೆ
ಜಂಬರ, ಜಟ್ಟಿ ಯಾವ್ದರ್‌ನು ಮಾಡ್ದುಲ್ಲೆ
ಸೊರ್ಗದ ಬಾಕಿಲ್ ಹಾಕಿದೆ ಗಡ
ಆಟಿಲಿ ಸತ್ತರೆ ಸೊರ್ಗ ಇಲ್ಲೆ ಗಡ

# ಹುಣ್ಣಿಮೆ ಚಂದ್ರ

– ಎಂ.ಜಿ. ಕಾವೇರಮ್ಮ

ಹುಣ್ಣಿಮೆ ಚಂದ್ರನ ಸೊಬಗ್‌ನ ನೋಡಿ
ಕಣ್ಣ್‌ಗೆ ಬಾಳ ಕುಸಿ ಆತ್
ಬಣ್ಣನೆ ಮಾಡಿಕೆ ಪದಗಳೆ ಇಲ್ಲೆ
ಸುಣ್ಣದ ಬಣ್ಣದ ಹಾಂಗಿತ್ತ್ ॥1॥

ಹಾಲ್‌ನ ಬೆಳದಿಂಗ್ಳ್ ಸುತ್ತ್ಲೋಳು ತುಂಬಿತ್ತ್
ಹುಣ್ಣಿಮೆ ಚಂದ್ರ ನೆಗಾಡ್ತಿತ್ತ್
ಬೂಮಿ ಮೇಲೆಲ್ಲಾ ತೊಂಪುನ ಬೊಳ್ಪಿತ್
ಮೊನ್ಸಿಗೆ ಬಾಳ ಕುಸಿ ಆಗಿತ್ತ್ ॥2॥

ಇಜ್ಜೆಲ್‌ನ ಮಡೆಲಿದ್ದ ಮೊಣ್ಣ್‌ನ ಚಿಂಟೆಲಿ
ಕುದ್ಕಂಡ್ ಚಂದ್ರನ ನೋಡಿಕನ
ಮೊಜ್ಜಿಗೆಲಿ ತೇಲುವ ಬೆಣ್ಣೆನ ಹಾಂಗೆ
ಹುಣ್ಣಿಮೆ ಚಂದ್ರ ಕಾಂಬಾತಿತ್ತ್ ॥3॥

ತಿಂಗಳ ಬೊಳ್ಪು ಬೂಮಿ ಮೇಲೆಲ್ಲಾ
ಬಿಳಿ ಸೀರೆ ಹೊದ್ದಾಂಗೆ ಕಾಂಬೊತಿತ್ತ್
ಪೊಂಗಾರೆ ಮರಲಿ ಅರ್‌ಳಿದ ಮೊಲ್ಲಿಗೆ
ಗಮಲ್‌ನು ಮೂಂಕಿಗೆ ತಾಂಗ್‌ತಿತ್ತ್ ॥4॥

ಎಷ್ಟ್ ನೋಡಿರೂ ಇನ್ನೂ ನೋಡೊಕೂಂತ
ಹುಣ್ಣಿಮೆ ಚಂದ್ರ ಹೊಳ್ಯಾತಿತ್ತ್
ಮೊರ್ಡುವ ಮಕ್ಕಳ ಅಳ್ಗೆಲ್ ನಿಲ್ತಿತ್ತ್
ಚಪ್ಪಾಳೆ ಹೊಡ್ಕಂಡ್ ನೋಡ್‌ತಿದ್ದೊ॥5॥

ತಿಂಗಳಿಗೊಮ್ಮೆ ಹುಣ್ಣಿಮೆ ಚಂದ್ರಾ
ಉರುಂಟಾಗಿ ಕಣ್ಣಿಗೆ ಕಂಡಾದೆ
ಬಾಣಲಿ ಚಂದ್ರ ಕಾನದ ದಿನ
ಅಮಾಸೆ ಇರ್ಲ್ ಬಂದಾದೆ

ಹಗಲ್‌ಗೆ ಸೂರ್ಯ ಇರ್ಳ್‌ಂಗೆ ಚಂದ್ರ
ದೇವರ ಸೃಷ್ಟಿ ನಾವ್ನಟ್ಟು
ಸೂರ್ಯನು ಚಂದ್ರನು ಇರಿಕನ ಮುಟ್ಟ
ಭೂಮಿಲಿ ಗಾಳಿ, ನೀರ್‌ನು ಉಟ್ಟು

* * * * *

# ಒಂದೇ ಬೊಳ್ಳಿನ ಹೂವುಗ

-ಮನೋಜ್ ಕುಡೆಕಲ್ಲ್

ಒಂದೆ ಬೊಳ್ಳಿನ ಹೂವುಗ ನಾವು
ಅರಳಿ ಊರ್‌ನ ತುಂಬೆಲ್ಲ
ಬನ್ನಿ ಸೂಸಮೊ ಕೀರ್ತಿ ಪರಿಮಳ
ಲೋಕದಗಲಕೂ ಮುಂದೆಲ್ಲ

ಬೆಳಿವ ಬೊಳ್ಳಿ ಸೊಕ್ಕೋಕು
ಗೌಡ ಸಂಸ್ಕೃತಿನ ಪಸಲ್‌ಲಿ
ಬೇರುನು ಇಳ್ಯೋಕು ಗಟ್ಟೀಲಿ
ಎಂದೂ ಮಸುಗದೆ ಅಲ್ಲಿಂದ
ಬಾಣನೆ ಗುರಿ ಇಲ್ಲಿಂದ
ಚಿಗ್‌ರಿದ್ ಬೆಳ್ಯೋಕು ಇಂದ್‌ಂದ

ಹಬ್ಬೋಕು ಸುತ್ತಿದ್ ಧೈರ್ಯಲಿ
ನಮ್ಮದೆ ಬಾಸೆನ ಚಪ್ಪರಲಿ
ಹಾಕಿದ್ ಕೊಟ್ಟೊಳೊ ಹಿರಿಯವ್
ನೆನ್ಸಿದ್ ಇಂದ್‌ನ ನಮ್ಮೆಲ್ಲ
ಬಳ್ಸಿದ್ ಬಾಳೊಮೊ ಅದರೆಲ್ಲ
ಪೋಂತಿದ್ ಉಳ್ಸೊಮೊ ಮುಂದೆಲ್ಲ

* * * * *

# ಮೊದ್ವೆ

- ಮನೋಜ್ ಕುಡೆಕಲ್ಲ್

ಬಿಳಿ ತುಂಬಿದ ಬಟ್ಟೆಗ ನಂಗೆ
ಒಳಗೆನ ಬಣ್ಣ ಕಾಣದ ಹಾಂಗೆ
ಸಿಂಗಾರಲಿ ಚೆನ್ನದ ಗೊಂಚಲ್ ನಿಂಗೆ
ಮೈಯೆಲ್ಲ ಮಿಣ್ಕುವ ಹಾಂಗೆ.
ಇನ್ನ್ಂದ, ಬಣ್ಣ ಬಣ್ಣದ ದಾರಿಲಿ
ನಮ್ಮಿಬ್ಬರ ಬಾಳ್ ಒಂದೆ ಗೂಡುಲಿ.
ಅದ್ಕೆ ಒಂದ್ ನೆವನ ಇದ್‌ನೆ.
ಮೊದ್ವೆ ತೇಳ್ವ ಜಂಬರ ನಾವ್ಗನೆ.
ತಾಳಿ, ಪಿಂಗಾರ, ಹೂಮಾಲೆ ಅಚೀಚೆ
ಕುಲ-ಗೋತ್ರ, ಲಗ್ನ-ಗಳಿಗೆ ತೇಳ್ವ
ಹದ ಮಾಡ್ದ ಈ ಹೊತ್ತು ನಡಿಲಿ.

* * * * *

# ಹಬ್ಬಲಿನೂ ಹೆದ್ರಿಕೆ ಉಟ್ಟು....!

- ಮನೋಜ್ ಕುಡೆಕಲ್ಲ್

ಕಾದಿದ್ದೆ ಆಸೆಲಿ ಹಬ್ಬಕೆ ಅಂದ್ ನಾ..
ತೆಗಿಸಿದ್ದ್ ನಾಕಯ್ದ್ ಕಟ್ಟ ಪಟಾಕಿತೇಳ್ವಂತದ್
ಲಕ್ಷ್ಮಿ-ವಾಲೆ ತೆಳ್ವ ಬತ್ತಿನೇ ಕಾಣದಂತದ್..
ಹೊಡ್ಸಿರೆ ಹಕ್ಕಲೆನವನ ಕೆಬಿಚೆಂಡೆ ಒಡಿವಂತದ್..
ಕನ್ಸುಲೂ ದೋಸ್ತಿನ ಪಟಾಕಿ ಕದ್ದ್‌ಒಡ್ಸಿದಾಂಗದ್..
ಬೊಳ್ಪುಗೆ...
ಟಿ.ವಿ.ಲಿ ಇತ್ತ್ ಸುಪ್ರಭಾತನಾಂಗದ್..
ಕಣ್ಣ್ ಮೋರೆ ಇಡೀ ಕರ್‌ಂಚಿ ಹೋದಂತದ್..
ಸೆನಿಸೆನಿತ ಮನ್ಸ್ ಹದ್ಕ್‌ಸುವಂತದ್..
ಎಲ್ಲಿತ್ತ್ ದೈರ್ಯ ನಂಗಂದ್ ಪಟಾಕಿ ಮುಟ್ಟಿಕದ್..
ಮುಗ್ಸಿದೆ ಅಂದರ್ನು ಹಬ್ಬನಂದ್,
ಬರೀ ಚೆಬೊಳೆಲಿ ದೀಪ ಹೊತ್ಸಿದ್..
ಅಂದರೂ ಅದರ್ಲಿದ್ದ
ಕುಸಿ ಮಾತ್ರ ಮನ್ಸ್ ತುಂಬ್ಸುವಂತದ್..

* * * * *

# ಸುಕ್ರುಂಡೆ

– ಶ್ರೀಮತಿ ರೇಷ್ಮ ಕರುಣಾಕರ

**ಬೇಕಾದ ಸಾಮಾಗ್ರಿಗ :**

1. ಹೊದುಲು (ಹೊದುರಿ) – 1/2 ಕೆ.ಜಿ.
2. ತೆಂಗಿನಕಾಯಿ – 1
3. ಎಳ್ಳು – 100 ಗ್ರಾಂ (ಹುರ್ದು ಹುಡಿಮಾಡಿ)
4. ಬೆಲ್ಲ – 1/4 ಕೆ.ಜಿ
5. ಏಲಕ್ಕಿ – 6–7 (ಹುಡಿಮಾಡಿ)
6. ಅವಲಕ್ಕಿ – ಮುಷ್ಟಿ
7. ಬೆಳ್ತಕ್ಕಿ – 1 ಪಾವು
8. ಉದ್ದಿನ ಬೇಳೆ – 2 ಚಮಚ
9. ಅರಿಶಿನ
10. ಉಪ್ಪು

**ಮಾಡ್ವ ಕ್ರಮ :**

ಹೊದುಲು ಮತ್ತೆ ಅವಲಕ್ಕಿನ ಬಿಸ್ಲಿಗೆ ಒಣ್ಸಿಸಿ ಮಿಕ್ಸಿಲಿ ಹದಕ್ಕೆ ಹುಡಿ ಮಾಡಿ ಇಸಿಕಣಕು. ಬೆಲ್ಲನ ಕಾಲ್ ಲೋಟ ನೀರ್ ಹಾಕಿ ಬಿಸಿ ಮಾಡೊಕು. ಬೆಲ್ಲ ನೀರಾಕನ ಹುರ್ದು ಹುಡಿ ಮಾಡಿದ ಎಳ್ಳು, ಹುಡಿ ಮಾಡ್ದ ಏಲಕ್ಕಿ, ಹೆರ್ದ ಕಾಯಿ ಮತ್ತೆ ಒಂದು ಚಿಟಿಕೆ ಉಪ್ಪು ಹಾಕಿ ಲಾಯ್ಕ ಮೊಗ್ಚಕು. ಒಲೆಂದ ಇಳ್ಸಿ ಚೆಣ್ದಾ ಮೇಲೆ ಹೊಡಿ ಮಾಡ್ದ ಹೊದ್ಲು ಮತ್ತೆ ಅವಲಕ್ಕಿನ ಹಾಕಿ ಲಾಯ್ಕ ಕಲ್ಸಿಕಣಕು. ಇನ್ನು ಲಾಯ್ಕ ಕಲ್ಸಿ ಹೋಕೆ ಒಮ್ಮೆ ಮಿಕ್ಸಿಲಿ ಹಾಕಿ ಮೂರ್ನಾಲ್ಕು ಸೆಕೆಂಡ್ ತಿರ್‍ಗಿರು ಲಾಯ್ಕ ಆದೆ. ಆಮೇಲೆ ಆ ಪಾಕನ ಹದದ ಸಣ್ಣ ಉಂಡೆ ಕಟ್ಟಿಕಣಕು.

ಅಕ್ಕಿ ಮತ್ತೆ ಉದ್ದುನ ಅರ್ಧಗಂಟೆ ಪದನ್ಸಿ, ದೋಸೆ ಬಂದದ ಹದಕ್ಕೆ ಕಡ್ದ್ ಹಂಞ ಅರಿಶಿನ ಮತ್ತ್ ರುಚಿಗೆ ಬೇಕಾದಷ್ಟ್ ಉಪ್ಪು ಹಾಕೊಕು. ಕಟ್ಟಿ ಇಸಿದ ಉಂಡೆನ ಒಂದೊಂದಾಗಿ ಬಂದಕ್ಕೆ ಕಂತಿಸಿ ಎಣ್ಣೆಲಿ ಕಾಸೊಕು. ಬಂಗಾರದ ಬಣ್ಣ ಬಾಕನ ಎಣ್ಣೆಂದ ತೆಗಿಯಕು. ಹಿಂಗೆ ಮಾಡ್ವ ಸುಕ್ರುಂಡೆನ ಸುಮಾರ್ ಒಂದು ತಿಂಗಳವರೆಗೆ ಗಾಳಿ ಸೇರದಂಗೆ ಕಟ್ಟಿ ಇಸಿರೆ ಏನು ಆದುಲೆ.

* * * * *

# ತೊಳಸಿನ ಹಿಟ್ಟು

**ಬೇಕಾದ ಸಾಮಾಗ್ರಿಗ :**

1. ಒಂದು ಪಾವು ಕುಚುಲಕ್ಕಿ
2. ಒಂದು ಪಾವು ಬೆಳ್ತಿಗೆ ಅಕ್ಕಿ
3. ಒಂದು ಟೀ ಚಮಚ ಮೆಂತೆ
4. ಹೆರ‍್ದ ತೆಂಗಿನಕಾಯಿ ಎರಡು ಮುಷ್ಟಿ
5. ಹೆರ‍್ದ ಬೆಲ್ಲ - ಸ್ವಲ್ಪ
6. ಅರ್ಧ ಟೀ ಚಮಚ ಅರಿಶಿನ
7. ಹಂಞ ಉಪ್ಪು
8. ಹಂಞ ತುಪ್ಪ

**ಮಾಡ್ವ ಕ್ರಮ :**

ಕುಚುಲು ಮತ್ತು ಬೆಳ್ತಿಗೆ ಅಕ್ಕಿನ ಬೇರೆ ಬೇರೆಯಾಗಿ ಹೊರ‍್ದ್ ತರಿ ತರಿ ರವೆನಂಗೆ ಹುಡಿ ಮಾಡಿಕಣಕು. ಮೆಂತೆನ ಹೊರ‍್ದ್ ಸಣ್ಣ ಹುಡಿ ಮಾಡಿಕಣಕು. ಒಂದು ಪಾತ್ರೆಲಿ 2 ಲೀಟರ್ನಷ್ಟ್ ನೀರ್ನ ಕುದ್ಸಿ ಅರಿಶೀನ ಮತ್ತು ಉಪ್ಪುನ ಹಾಕೊಣಕು. ಹೊಡಿ ಮಾಡ್ದ ಅಕ್ಕಿಗಳನ್ನ ಮೆಂತೆನನು ಕೊದಿವ ನೀರಿಗೆ ಹಂಞ ಹಂಞನೆ ಹಾಕಿ ಲಾಯ್ಕ ತೊಳಸಕು. ಅದ್ ಬೆಂದ ಸೋಜಿನಂಗೆ ಆದ ಮೇಲೆ ತೆಗ್ದ್ ಇಳ್ಸಿಕಣಕು. ಮತ್ತೆ ಇಳ್ಸಿದ ಮೇಲೆ ಹಂಞ ತೆಣೆಯಕನ ತುರ‍್ದ ಕಾಯಿ, ಬೆಲ್ಲ ಮತ್ತೆ ತುಪ್ಪ ಹಾಕಿಕಂಡ್ ತಿನ್ನೊಕು. ಭಾರಿ ಲಾಯ್ಕದ ರುಚಿನ ಈ ಹಿಟ್ಟುನ ಬಾಣಂತಿಗೆ ಹದ್‌ನಾರ್ ಮೀದ ಮೇಲೆ ಮಾಡಿಕೊಡುವ ಕ್ರಮ ಉಟ್ಟು.

* * * * *

# ಅರೆಬಾಸೆ ಗಾದೆಗ

**ಸಂಗ್ರಹ : ಸಂಗೀತ ರವಿರಾಜ್**

1. ಉಂಡವ ಹರಸಕು ಅಂತ ಇಲ್ಲೆ, ನೊಂದವ ಬಯ್ಯಕುಂತ ಇಲ್ಲೆ.
2. ಕೊಟ್ಟ ದೇವರೇ ತಕಂಡ್ ಹೋಕನ ಮರ್ದುದು ಯಾಕೆ?
3. ಹಿಂಬೊತ್ತು ಬಾವ ಮಳೆನು, ಹಿಂಬೊತ್ತಿಗೆ ಬಾವ ನೆಂಟನು ಹೋದುಲೆ.
4. ಅಂಗೈನ ಹಂಗೆ ಹೊಲ ಮಾಡ್ರೆ, ಮುಂಗೈ ತುಂಬಾ ತುಪ್ಪ.
5. ಹಾಲಿಗೆ ಹೋದವಂಗೆ ಎಮ್ಮೆನ ಕ್ರಯ ಎಂತಕೆ?.
6. ತೌಡು ತಿಂಬವ ಹೋಕನ, ಉಮಿ ತಿಂಬವ ಬಾತ್.
7. ಬಾನನ ಮಳೆನನು, ಗರ್ಭಿಣಿ ಹೆಣ್ಣ್‌ನನು ನಂಬಿಕೆ ಆದುಲೆ.
8. ಹೂಣದೆ ಗದ್ದೆ ಹಾಳಾತ್, ನೋಡದೆ ಮನೆ ಹಾಳಾತ್.
9. ಹಂಞಾ ಕಲ್ತವಂಗೆ ಅಬ್ಬರ ಜಾಸ್ತಿ
10. ಬಲೆಗೊಂದು ಕೊಳ್ಳಿ, ಮನೆಗೊಂದು ಅಜ್ಜಿ.
11. ಹಣೆಬರಹ ಕೆಡಿಕಾನ ಉಟ್ಟ ಬಟ್ಟೆನೆ ಹಗೆಯಾದೆ.
12. ಬಾಯಿಲಿ ಬೊಮ್ಮ, ಹೊಟ್ಟೆಲಿ ಗುಮ್ಮ.
13. ಬಲಕೈಲಿ ಎಣ್ಣೆ, ಎಡಕೈಲಿ ದೊಣ್ಣೆ.
14. ಖರ್ಜೂರ ಹಣ್ಣಾಕನ ಕಾಗೆ ಬಾಯಿಲಿ ಹುಣ್ಣು.
15. ಸೊಸೆಗೆ ಹೆದ್ರಿ ಅತ್ತೆ ತವರು ಮನೆಗೆ ಹೋದ ಹಂಗೆ.
16. ಅಂಡೆ ಬಾಯಿ ಮುಚ್ಚಕ್, ದೊಂಡೆ ಬಾಯಿ ಮುಚ್ಚಿಕೆ ಆದ್ಲೆ.
17. ಅಕ್ಕ ಬರಕು, ಬೇಜರ ಹೋಕು.
18. ಹಗ್ಲ್ ಮಲ್ಲವಂಗೆ ಬುದ್ದಿ ಮಂದ.
19. ಆನೆಗೆ ಗಂಟೆ ಬೇಕಾ?
20. ಹೋದರೆ ಒಂದು ಬೀಜ, ಆದರೆ ಒಂದು ಮರ.
21. ಕತ್ತೆ ಮೇಯ್ದಲ್ಲಿ ಮತ್ತೆ ಮೇವಿಲ್ಲೆ.
22. ಉಪ್ಪರಿಗೆನ ಮನೆ ಇದ್ದರುಸ, ಉಪ್ಪಿಲ್ಲದೆ ಆದುಲೆ.
23. ಇಲ್ಲದ ಊರಿಗೆ ದಾರಿ ಕೇಳ್ದ ಹಂಗೆ.
24. ಉಂಬಕ್ಕಿಲ್ಲದ ದಿನ ಏಕಾದಶಿ
25. ಚಪ್ಪರಕ್ಕೆ ಆರು ಸಾವಿರ, ಜಂಬರಕ್ಕೆ ಮೂರ್ ಸಾವಿರ್.
26. ದೊಡ್ಡವರೊಟ್ಟಿಗೆ ಹಗೆ ಬೇಡ, ಸಣ್ಣವರೊಟ್ಟಿಗೆ ಸಲಿಗೆ ಬೇಡ.
27. ನೀರ್‌ನ ಕಂಡರೆ ಬೆಣ್ಣೆ ಬಾದ್ಲೆ, ಹ್ಯೊಗೆನ ಹಿಂಡಿರೆ ಎಣ್ಣೆ ಬಾದ್ಲೆ.

28. ಪೆಟ್ನ ಗಾಯ ಹೋದೆ, ಮಾತ್‌ನ ಗಾಯ ಹೋದೆನಾ?
29. ಬಾವಿಲೇ ಇರ್ವ ಕಪ್ಪೆ ನೀರ್ ಕುಡಿಯದೆ ಇದ್ದದೆನಾ?
30. ಹೋಗುಂತ ಹೇಳ್ವ ಬದ್ಲ್ ಹೊಗೆ ಹಾಕಿದ ಹಂಗೆ.
31. ಕಳ್ಳಂಗೆ ತಿಂಗಳ್ ಬೊಳ್ಪು ಕಂಡರೆ ಆದ್ಲೆ.
32. ಕೋಣೆಲಿ ಬೆಳ್ದವು ಕೊಳ್ತವೆ, ದಾರಿಲಿ ಬೆಳ್ದವು ಬೆಳ್ದವೆ.
33. ಎತ್ತ್‌ನ ಮುಂದೆ ನಡಿಯಕಾಗದ್, ಕತ್ತೆನ ಹಿಂದೆ ನಡಿಯಕಾಗದ್.
34. ಮೆಚ್ಚಿದ ಗೂಡೆಗೆ ಅರೆಮೊರ್ಲು ಇದ್ದರು ಆದೆ.
35. ಇರ್ಲ್ ಉಂಬದವನತ್ರ ತಣ್ಣನ್ನ ಕೇಳ್ದ ಹಂಗೆ.
36. ಉಗುರುಂದ ಆದಕ್ಕೆ ಕೊಡ್ಲಿ ಏಕೆ?
37. ಪಾಪದವಂಗೆ ಆನೆ ದಾನ ಸಿಕ್ಕಿದ ಹಂಗೆ.
38. ನಾನ್ ಹೊಡ್ದಂಗೆ ಮಾಡ್ನೆ, ನೀನ್ ಮರ್ಲ್ವಂಗೆ ಮಾಡ್.
39. ಕುರೆ ಮೊಸ್ರ್ ತಿಂದ್, ಕತ್ತೆನ ಮುಸುಂಡಿಗೆ ಉಜ್ಜಿದ ಹಂಗೆ.
40. ನಾಲಿಗೆ ಕಹಿ ಆದಕ್ಕೆ, ಹೋಳಿಗೆನಾ ಬಯ್ಯಕೆ ಆದೆನಾ?
41. ಅಯ್ಯೆ ಗೂಬೆ ಆದರೆ ಏನ್? ಮಗಳ್ ಗುಲಾಬಿ ಆದರೆ ಸಾಕ್.
42. ತಾಂಗುವ ಮುಂದೆನೆ ಬಗ್ಗಿ ನಡಿಯದು ಒಳ್ಳೆದ್
43. ಹ್ಯೊಗೆಲಿ ಬರ್ದ್ ಮಡ್ಲ್‌ಲಿ ಕಟ್ಟಿದ ಹಾಂಗೆ.
44. ಅಕ್ಕಿ ಕೊಟ್ಟ್ ಉಂಬಕೆ ಅಕ್ಕನ ಮನೆನೆ ಆಕೋ?
45. ಮೋರೆ ನೋಡಿ ಗುರ್ತ ಹಿಡಿಯದ ಮೇಲೆ ಉಗುರು ನೋಡ್ರೆ ತಿಳ್ದದೆನಾ?
46. ಶಾನ್‌ಭೋಗನ ಸಂಬಳ ಬಾತಾಂತ ಕೇಳ್ಬೇಡ, ಹೆಣ್ಣ್‌ನ ಕಡೆವು ಉಂಡನಾ ಅಂತ ಕೇಳ್ಬೇಡ.
47. ಕಜ್ಜಿ ಇದ್ದವಂಗೆ ನಾಚಿಕೆ ಇಲ್ಲೆ, ಅಜ್ಜಿ ಇದ್ದವಂಗೆ ಯೋಚನೆ ಇಲ್ಲೆ.
48. ಆಕಾಶ ಹರ್ದ್ ಬೀಳಿಕಾನ ಕೈ ಒಡ್ಡಿರೆ ನಿಂತದೆನಾ.
49. ಕಾಗೆಗೆ ಹೆದ್ರಿ ಹಪ್ಪಳ ಮಾಡ್ದೊರ ಬುಡಿಕೆ ಆದೆನಾ?
50. ಕೈ ಕಾಲ್ ಕಟ್ಟಿ ಚಟ್ಟಕ್ಕೆ ಹಾಕಿರು ಆಯುಷ್ಯ ಇದ್ದವ ಬದ್ಕಿ ಬಂದದೆ.
51. ಸುರುಸುರುಗೆ ಚಿನ್ನ ಕೊನೆಗೆ ಕಬ್ಬಿಣ.
52. ಬೇರೆಯವನ ಹೆಣ್ಣ್ ನೋಡಿಕೆ ಲಾಯ್ಕ್.
53. ನಿನ್ನ ಮೋರೆ ಓರೆಯಾದಕ್ಕೆ ಕನ್ನಡಿನ ದೂರ್ರು ಯಾಕೆ?
54. ಒಪ್ಪದ ಸೀರೆ ಒಂಬದಿದ್ದರೇನ್ ಫಲ?
55. ಕೊಟ್ಟ ಸಾಲ ಕೇಳದೆನೆ ಹೋತ್, ಮಾಡ್ದ ಬೆಳೆ ಕೊಯ್ಯದೆನೆ ಹೋತ್.
56. ತರ್ಕ ಮಾಡ್ರೆ ಬರ್ಕತ್ತ್ ಇಲ್ಲೆ.
57. ದಿನ ಇದ್ದ ಹಾಂಗೆ ಇರ್ದುಲೆ.
58. ಮಾಡಿಕೆ ಕೆಲ್ಸ ಇಲ್ಲೆ, ಕೂರಿಕೆ ಪುರುಸೊತ್ತು ಇಲ್ಲೆ.

59. ಮೋರೆನ ಹೋದ ಮೇಲೆ, ಮೂಗುನ ಆಸೆ ಏಕೆ?
60. ರಟ್ಟೆ ಗಟ್ಟಿ ಇದ್ದರೆ ರೊಟ್ಟಿಗೆ ತೊಂದರೆ ಇಲ್ಲೆ.
61. ಸತ್ತ ಎಮ್ಮೆಗೆ ಹತ್ತ್ ಕುಡ್ತೆ ಹಾಲ್ ಜಾಸ್ತಿ ಗಡ.
62. ಸಾಸುವೆ ಕಾಳ್ ಹಾಕಿಕೆನೆ ಜಾಗ ಇಲ್ಲೆ.
63. ಹಣ್ಣ್ ತಿಂದವ ತಪ್ಪಿಸಿಕಣ್ತ್, ಸಿಪ್ಪೆ ತಿಂದವ ಸಿಕ್ಕಿ ಬೀತ್.
64. ಹೆದರ್ದವನ ಮೇಲೆ ಹಾವು ಹಾಕಿದ ಹಂಗೆ.
65. ಹಾಗಲಕಾಯಿದ್ ಹಣ್ಣ್ ಸಿಕ್ಕಿರೇನ್? ಸೊಪ್ಪು ಸಿಕ್ಕಿರೇನ್?
66. ಕೆಲಸದ ದಡ್ಡಿಗೆ ಮಕ್ಕಳ ಅಡ್ಡಿ.
67. ಕುರುಡನ ಹೆಣ್ಣ್‌ಗೆ ದೇವರ ಕಾವಲು.
68. ತಲೆಗೆ ಹೊಯ್ದದ್ ಕಾಲಿಗೆ ಇಳ್ದದೆ.
69. ಒಂದು ದಿನದ ಆಟಕೆ, ಮೀಸೆ ಬೋಳಿಸಿದ ಹಂಗೆ
70. ಮಾತಾಡಿಕಂಡಿದ್ದರೆ ಮಂಜ, ರೀತಿಲಿದ್ದರೆ ಸೊಸೆ.
71. ಕರ್ಪೂರನ ತಿಪ್ಪೆಲಿಸಿರೆಸ ಪರಿಮಳ ಹೋದ್ಲೆ.
72. ಕಿಡಿ ಸಣ್ಣದಾದರುಸ ಕಾಡೆಲ್ಲ ಸುಟ್ಟದೆ.
73. ಪ್ರಾಯ ಬಾಕನ ಆಯ ತಪ್ಪಿದೆ.
74. ದುಡ್ಡ್‌ನ ಆಸೆಗೆ ತುಪ್ಪ ಮಾರಿ ಕುಪ್ಪಿ ನೆಕ್ಕಿತ್.
75. ಅಡಿಕೆನ ಕಂಕುಳ್‌ಲಿ ಇಸಿಕಣಕ್, ಅಡಿಕೆ ಮರ ಆಕನ ಸಾಧ್ಯನ?
76. ಲಾಭನ ಲೆಕ್ಕ ಹಾಕಿ ಬಾಳೆಹಣ್ಣ್ ತೀಂತ್.
77. ಕೊತ್ತಿಗಳ ಜಗಳಕ್ಕೆ ಕುರೆನ ತೀರ್ಪು.
78. ಇದ್ದವ ತಿಂದರೆ ಮದ್ದಿಗೆ, ಇಲ್ಲದವ ತಿಂದರೆ ಹೊಟ್ಟೆಗಿಲ್ಲದೆ.
79. ಹಸಿವಾಕನ ಗೈಪು ಬೇಡ, ನಿದ್ದೆ ಬಾಕನ ಹಾಸಿಗೆ ಬೇಡ.
80. ಹಿಂದೆಂದ ಆನೆ ಹೋಕಾಗದ್, ಮುಂದೆಂದ ಉಮ್ಮಣಿ ಹೋಕಾಗದ್.
81. ಪಾಪದವನ ಸೊಸೆಗೆ ಎಲ್ಲವು ಅತ್ತೆಕ್ಕಳೇ
82. ಕೋಗಿಲೆಗೊಂದು ಕಾಲ, ಕಕ್ಕೆಗೊಂದು ಕಾಲಂತ ಹೇಳ್ದಂಗೆ ಆತ್.

* * * * *

# ಅರೆಬಾಸೆ ಗಾದಗ

ಸಂಗ್ರಹ: ಎಂ.ಜಿ. ಕಾವೇರಮ್ಮ

- ಲಾಭ ಇಲ್ಲದೆ ಚೆಟ್ಟಿ ಬೊಳ್ಳಕ್ಕೆ ಹೋದ್ಲೆ.
- ಹೆತ್ತೋವ್ಕೆ ಹೆಗ್ಗಣ ಮುದ್ದು.
- ಕುದ್ ತಿಂಬವಂಗೆ ಕೊಪ್ಪರಿಗೆ ಹಣ ಸಿಕ್ಕಿರೂ ಸಾಲ್ದ್.
- ಅತ್ತೆನ ಮಾತ್ ಕೇಳಿ ಮೊಟ್ಟೆಲಿ ಕಿಚ್ಚಿ ಎದ್ದದೆ.
- ಅತ್ತೆನ ಮಾತ್ ಕೇಳಿ ಹೊಟ್ಟೆಲಿ ಕೆಸ ಕೊಯ್ದಾಂಗಾತ್
- ಜಾಗ ನೋಡಿ ಲಾಗ ಹಾಕ್.
- ನಾಯಿ ಬೀಲಕ್ಕೆ ದಬ್ಬೆ ಕಟ್ಟಿರೆ ನೆಟ್ಟಂಗಾದೆನೋ?
- ಅಲ್ಪಂಗೆ ಐಸಿರಿ ಬಾಕನ ನೊಡು ಇರ್‍ಳ್ ಕೊಡೆ ಹಿಡ್ತ್ ಗಡ.
- ಕಳ್ಸೆ ಅಕ್ಕಿ ಹೊರಿಕೆ ಬೊತ್ತದವನೊಟ್ಟಿಗೆ ಮುಡಿ ಅಕ್ಕಿ ಹೊರಿಕೆ ಹೇಳ್ತ ಗಡ.
- ಸಾಲ ಮಾಡಿ ಓಲೆ ತಾತ್. ಓಲೆ ಮಾರಿ ಬಡ್ಡಿ ಕಟ್ಟಿತ್.
- ಕೆಟ್ಟ ಮೇಲೆ ಬುದ್ಧಿ ಬಾತ್. ಅಟ್ಟ ಮೇಲೆ ಒಲೆ ಉರ್ತ್
- ಸಾಯಕಾಕನ ಮಾಳಪ್ಪಯ್ಯ ಮೀನ್ ತಿಂದ್ ಸತ್ತತ್ ಗಡ.
- ನಕ್ರು ಹಾಕಿ ಮಡಂಜಿ ಹಿಡ್ದಾಂಗಾತ್.
- ಮಕ್ಕಳ ಮಾತ್ ಕೇಳಿ ಒಕ್ಕಲೆದ್ದ್ ಹೋದೊ ಗಡ.
- ಸಸಾರ ಕೊಟ್ಟ ನಾಯಿ ನೆಸಲೆ ನೆಕ್ಕಿತ್ ಗಡ.
- ಅಂಗೈ ತೋರ್ಸಿ ಅವಲಕ್ಷಣ ಹೇಳ್ಸಿ ಕಂಡಾಂಗಾತ್.
- ಹಾಲ್ ಕುಡ್ದ ಮಕ್ಕಳೇ ಬೊದ್ಕುದುಲ್ಲೆ ಇನ್ನ್ ಇಸ ಕುಡ್ದ ಮಕ್ಕ ಬೊದ್ಕಿಕುಟ್ಟೋ?
- ಉತ್ತರಕ್ಕೆ ಉತ್ತರ ಕೊಟ್ಟರೆ ಅದ್ ಎತ್ತರಕ್ಕೆ ಹೋದೆ.
- ದೆಸೆ, ಪಸೆ, ಪೈಸೆ ಇದ್ದರೆ ಎಲ್ಲರನೂ ಗೆಲ್ಲಕ್.
- ಹತ್ತ್ ಮಕ್ಕಳ ಅಯ್ಯೆ ದಾರಿಲಿ ಬಿದ್ದ್ ಸತ್ತತ್ ಗಡ.
- ಕಾಲಕ್ಕೆ ತಕ್ಕ ಹಾಂಗೆ ಕೋಲ ಕಟ್ಟ್.
- ಮಿಣ್ಬುರಿ ಹೇಳ್ತ್ ಗಡ, ನನ್ನ ಕುಂಡೆಂದಳೇ ಬೊಳ್ಪಾದೂಂತ.
- ತಲೆಗೆ ಹೊಯ್ದ ನೀರ್ ಕಾಲ್ಗೆ ಬೀಳದೆ ಎಲ್ಲಿಗೆ ಹೋದೆ?
- ಮೊಡ್ಸರದ ಬಾಯಿನ ಹೊಲ್ಯಕ್, ಮೋಂಯಿಸರದ ಬಾಯಿನ ಹೊಲ್ಯಕಾದೆನೋ?
- ನೆರ್‍ದ ಮೇಲೆ ನಾಚಿಕೆ ಹೋತ್. ಹೆತ್ತ ಮೇಲೆ ಹೇಸಿಗೆ ಹೋತ್.
- ನೆರ್‍ಳಲಿ ಇದ್ದಂವಂಗೆ ಬಿಸ್ಲಲಿ ಇದ್ದಂವನ ಕಷ್ಟ ಏನ್‌ಂತ ಗೊತ್ತುಟ್ಟೋ?
- ನೀರೊಳಗೆ ಕುದ್ದ್ ಹೇತರೆ ಮೇಲೆ ಬಾರದೆ ಇದ್ದದೆನೋ?
- ಕಳ್ಳನ ಹೆಣ್ಣ್ ಯಾಗೋಳೂ ಮುಂಡೆನೆ.
- ತಲೆ ಗಟ್ಟಿ ಉಟ್ಟೂಂತ ಬಂಡೆಗೆ ಜೆಪ್ಪಿರೆ ಆದೆನೋ?
- ಕಳ್ಳನ ನಂಬಿರೂ, ಕುಳ್ಳನ ನಂಬಿಕೆ ಬೊತ್ತ್.
- ಇಚ್ಚೆ ಇಲ್ಲದ ಗಂಡಂಗೆ ಮೊಸ್ರಲಿ ಕಲ್ಲ್ ಗಡ
- ಹೊಸ ನೀರ್ ಬಂದ್‌ದ್, ಹಳೆ ನೀರ್ನ ಕೊಚ್ಚಿಕೊಂಡ್ ಹೋತ್.

## ಹಿಂಗಾರ ತ್ರೈಮಾಸಿಕ ಪತ್ರಿಕೆ ಚಂದಾದಾರನ ತಿಳುವಳ್ಕೆಗೆ

- ಕರ್ನಾಟಕ ಅರಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ
- ಆಗ್‌ವ 'ಹಿಂಗಾರ' ಪತ್ರಿಕೆನ ನೀವ್ ಎಲ್ಲವು ಸದಸ್ಯರ್ ಆಕು. ಬಿಡಿ ಸಂಚಿಕೆ
- ಬೆಲೆ ರೂ. 20.00, ತ್ರೈವಾರ್ಷಿಕಕೆ ರೂ. 200.00 ಅದೆ.
- ಸದಸ್ಯರ್ ಆದವುಕೆ ಪತ್ರಿಕೆನ ಅಂಚೆಲಿ ಕಳ್ಸುವೆ.
- ನೀವ್‌ಗಳ ಪರಿಚಯಸ್ತರಿಗೆ ಸದಸ್ಯರ್ ಆಕೆ ತಿಳ್ಸೊಕು.
- ಕತೆಗ / ಪದ್ಯಗ / ಚುಟುಕ /ಲೇಖನಗ ಇತಂವುಕ್ಕೆಲ್ಲಾ ಅವಕಾಸ ಉಟ್ಟು.
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಬರ್ದಿರಕು.
- ಹೆಸರ್ / ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.

ನಾವ್‌ಗಳ ವಿಳಾಸ :
**ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ –571 201,
ಕೊಡಗು ಜಿಲ್ಲೆ
ಈಮೇಲ್ : arebaseacademy@gmail.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 –223055

## ಅಕಾಡೆಮಿಯ ಪ್ರಕಟಣೆಗ

ಸರ್‍ಮಾಲೆ : ಎಂ.ಜಿ ಕಾವೇರಮ್ಮ
ಅಜ್ಜಪ್ಪನ ಕತಾ ಭಂಡಾರಂದ ಹೆರ್‍ಕಿದ ಕತೆಗ : ಎಂ.ಜಿ ಕಾವೇರಮ್ಮ
ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
ಕುಂಕುಮ : ಪೂಜಾರೀರ ಜಿ. ಮಾದಪ್ಪ
ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ ಮುಡೂರು
ಬೇಟೆನ ಬಿರ್ಸ – ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
ತೋರಣ : ಬಾರ್ಯಂಡ ಆರ್. ಜೋಯಪ್ಪ
ಬೊಲ್ಪು : ಲೋಕೇಶ್ ಕುಂಚಡ್ಕ
ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯನ

# ಅಕಾಡೆಮಿ ನಡ್ಸಿದ ಕಾರ್ಯಕ್ರಮಗ

ಶ್ರೀ ಗೋಪಾಲಕೃಷ್ಣ ಯುವ ಸಂಘ ಮತ್ತು ಚಾರಿಟೇಬಲ್ ಟ್ರಸ್ಟ್ ಇವ್ರ ಸಹಯೋಗಲಿ ಅವಂದೂರು ಗ್ರಾಮದ ಕಾಳೇರಮ್ಮನ ಅಯ್ಯಣ್ಣನವರ ಗದ್ದೆ ಇಲ್ಲಿ ಕೆಸರ್ ಗದ್ದೆ ಕ್ರೀಡೋತ್ಸವ ಮತ್ತೆ ಸಾಂಪ್ರದಾಯಿಕ ನಾಟಿ ಓಟ ನಡ್ಸ್ಯೊಲೊ.

ತಾರೀಕ್ 12.08.2016 ರ ಶುಕ್ರವಾರದಂದ್ ನಡ್ದ ಕಾರ್ಯಕ್ರಮನ ಶ್ರೀ ಮುದ್ಯನ ಚಂದ್ರಶೇಖರ್ ಅಧ್ಯಕ್ಷರ್ ಮದೆ ಗ್ರಾಮ ಪಂಚಾಯತ್ ಇವು ಚಾಲನೆ ನೀಡ್ದೊ, ಕಾಳ್ ಹೆಕ್ಕುದು, ಕೆಸರುಗದ್ದೆ ಓಟ,ಎತ್ತುಗಳ್ಲಿ ಗದ್ದೆ ಹೂಡ್ವ ಸ್ಪರ್ಧೆ, ಅಗೆ ತೆಗೆವ ಸ್ಪರ್ಧೆ, ನಾಟಿ ನೆಡ್ವ ಸ್ಪರ್ಧೆ, ಅಡಿಕೆ ಹಾಳೆಲಿ ಕೂರ್ಸಿ ಎಳಿವ ಸ್ಪರ್ಧೆ, ಅಂಬುಗಾಯಿ, ಹಗ್ಗಜಗ್ಗಾಟ, ಥ್ರೋಬಾಲ್ ಆಟ, ವಾಲಿಬಾಲ್ ಆಟ, ಕೃಷ್ಣ ರುಕ್ಮಿಣಿ ಓಟ ಇವ್‌ಗಳ್ನ ಏರ್ಪಡಿಸಿದ್ದೊ ಹಂಗೆ ಸಾಂಸ್ಕೃತಿಕ ಕಾರ್ಯಕ್ರಮನು ನಡ್ತ್ .

ಸಾಂಪ್ರದಾಯಿಕ ಕೃಷಿ ಬಗ್ಗೆ ಶ್ರೀ ಪಟ್ಟಡ ಶಿವಕುಮಾರ್ ನವು ವಿಚಾರಮಂಡನೆ ಮಾಡ್ದೊ.

ವಿರಾಜಪೇಟೆ ಕ್ಷೇತ್ರದ ಶಾಸಕರಾದ ಶ್ರೀ ಕೆ.ಜಿ.ಬೋಪಯ್ಯನವು ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ, ವಿಧಾನಪರಿಷತ್ ಸದಸ್ಯರಾದ ಶ್ರೀಮತಿ ವೀಣಾ ಅಚ್ಚಯ್ಯ ನವು ಸಾಂಪ್ರದಾಯಿಕ ನಾಟಿ ಓಟ ಚಾಲನೆ ಮಾಡ್ದೊ. ಕಾರ್ಯಕ್ರಮದ ಅಧ್ಯಕ್ಷತೆ ಶ್ರೀ ಕೊಲ್ಯದ ಗಿರೀಶ್ ಅಕಾಡೆಮಿ ಅಧ್ಯಕ್ಷರು ವಹಿಸಿದ್ದೊ. ತಾಲೂಕು ಪಂಚಾಯತ್ ಸದಸ್ಯರಾದ ಶ್ರೀ ಕೊಡಪಾಲು ಗಣಪತಿ, ಮದೆ ಗ್ರಾಮಪಂಚಾಯತ್ ಸದಸ್ಯರಾದ ಶ್ರೀ ಬೆಳ್ಯನ ರವಿ ಮತ್ತು ಶ್ರೀಮತಿ ಸವಿತ ಆಚಾರ್ಯ, ನಿವೃತ್ತ ಪೊಲೀಸ್ ಅಧಿಕಾರಿ ಚೊಕ್ಕಾಡಿ ಅಪ್ಪಯ್ಯ, ಕೊಡಗು ಗೌಡ ಸಮಾಜ ನಿರ್ದೇಶಕರಾದ ಶ್ರೀ ಕಾಳೇರಮ್ಮನ ಪಾಲಾಕ್ಷ, ಗೋಪಾಲಕೃಷ್ಣ ಯುವ ಸಂಘದ ಅಧ್ಯಕ್ಷರಾದ ಶ್ರೀ ಹೊಸೂರು ಗಿರಿ, ಹಿರಿಯ ಭತ್ತ ಬೆಳೆಗಾರರಾದ ಶ್ರೀ ದೇವಾಯಿರ ದೇವಯ್ಯ ಇವು ಉಪಸ್ಥಿತರಿದ್ದೊ.

**ಆಟಿ ಸಂಭ್ರಮ–2016 :** ದಿನಾಂಕ 14.08.2016 ಭಾನುವಾರ ದಂದ್ ಸುಳ್ಯ ತಾಲೂಕಿನ ದ.ಕ.ಜಿ.ಪ.ಹಿ.ಪ್ರಾ ಶಾಲೆ ಪೈಲಾರು ಇಲ್ಲಿ ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ (ರಿ) ಪ್ರಗತಿ ಬಂಧು ಸ್ವ ಸಹಾಯ ಸಂಘಗಳ ಒಕ್ಕೂಟ ಪೈಲಾರು, ಶ್ರೀ ಲಕ್ಷ್ಮೀ ಮಹಿಳಾ ಜ್ಞಾನವಿಕಾಸ ಕೇಂದ್ರ ಪೈಲಾರು ಮತ್ತೆ ಫ್ರೆಂಡ್ಸ್ ಕ್ಲಬ್ ಪೈಲಾರು (ರಿ) ಇವರ ಆಶ್ರಯಲಿ ಆಟಿ ಸಂಭ್ರಮ 2016 ಕಾರ್ಯಕ್ರಮನ ಏರ್ಪಡಿಸಿದ್ದೊ.

ಹೊತ್ತಾರೆ 9.00 ಗಂಟೆಗೆ ಶ್ರೀ ಪುಟ್ಟಣ್ಣಗೌಡ ನಾಯರ್ ಕಲ್ಲು ಇವು ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ . ಕಾರ್ಯಕ್ರಮದ ಅಧ್ಯಕ್ಷತೆ ಅಕಾಡೆಮಿ ಅಧ್ಯಕ್ಷರಾದ ಶ್ರೀ ಕೊಲ್ಯದ ಗಿರೀಶ್, ಮುಖ್ಯ ನೆಂಟ್ರಾಗಿ ಅಮರಮೂಡ್ನೂರು ಗ್ರಾಮ ಪಂಚಾಯತ್ ಅಧ್ಯಕ್ಷರ್ ಆದ ಶ್ರೀಮತಿ ಸೀತಾ ಹೆಚ್, ವ್ಯವಸಾಯ ಸೇವಾ ಸಹಕಾರ

ಬ್ಯಾಂಕ್ ಲಿ. ಚೊಕ್ಕಾಡಿ ಇದರ ಮಾಜಿ ಅಧ್ಯಕ್ಷರಾದ ಶ್ರೀ ಹರಿಶ್ಚಂದ್ರ ಮೋಂಟಡ್ಕ, ತಾಲೂಕು ಪಂಚಾಯತ್ ಸದಸ್ಯರಾದ ಶ್ರೀ ರಾಧಾಕೃಷ್ಣ, ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ (ರಿ) ಇದರ ಯೋಜನಾಧಿಕಾರಿಗಳಾದ ಶ್ರೀ ಯುವರಾಜ್ ಜೈನ್, ಶಿಸು ಅಭಿವೃದ್ಧಿ ಮತ್ತು ಕಲ್ಯಾಣ ಇಲಾಖೆ ಮೇಲ್ವಿಚಾರಕರಾದ ಶ್ರೀಮತಿ ಶೈಲಜಾ ದಿನೇಶ್ ಕುಕ್ಕುಜಡ್ಕ, ಪ್ರಗತಿಪರ ಕೃಷಿಕರಾದ ಶ್ರೀ ನಿರಂಜನ ಕೋಡ್ತುಗುಳಿ, ಶಾಲಾಭಿವೃದ್ಧಿ ಅಧ್ಯಕ್ಷರಾದ ಶ್ರೀ ಕೃಷ್ಣ ಪ್ರಸಾದ್ ಸಹಯೋಗ ನೀಡಿದ ಎಲ್ಲಾ ಸಂಘ ಸಂಸ್ಥೆಗಳ ಅದ್ಯಕ್ಷರ್ ಸದಸ್ಯರ್, ಸ್ಥಳೀಯ ನಿವಾಸಿಗಳು, ಭಾಷಾಭಿಮಾನಿಗ, ಅಕಾಡೆಮಿ ಸದಸ್ಯರ್, ಕಲಾವಿದರ್ ಕಾರ್ಯಕ್ರಮಲಿ ಭಾಗಿಯಾಗಿದ್ದೊ.

ಗ್ರಾಮೀಣ ಮನರಂಜನೆ ಕ್ರೀಡೆಗಾದ ಲಗೋರಿ, ಮಡಲ್ ಹೆಣೆಯೋದು ಕಾಯಿ ಕುಟ್ಟುದು, ಚೆನ್ನೆಮಣೆ, ಕುಂಟಬಿಲ್ಲೆ ಅಂಬುಗಾಯಿ, ನೋಂಡಿ, ಕಲ್ಲಾಟ, ಅಡಿಕೆ ಹಾಳೆಲಿ ಕುದ್ದ್ ಎಳೆಯೊದು ಕೆಸರು ಗದ್ದೆ ಓಟ ಇವುಗಳ್ನ ಹಮ್ಮಿಕೊಂಡಿದ್ದೊ. ಭಜನೆ, ಅರೆಭಾಸೆ ಜಾನಪದ ಹಾಡ್‌ಗಳ ಸ್ಪರ್ಧೆ ಜಾನಪದ ಸಂಭ್ರಮ ಸಾಂಸ್ಕೃತಿಕ ಕಾರ್ಯಕ್ರಮನ ಏರ್ಪಡಿಸಿದ್ದೊ,

**ಆಟಿ ಉತ್ಸವ :** ದಿನಾಂಕ 15.08.2016 ರಂದ್ ಸುಳ್ಯ ತಾಲೂಕಿನ ಸ.ಉ.ಹಿ.ಪ್ರಾ ಶಾಲೆ ಅಜ್ಜನಗದ್ದೆ ಇಲ್ಲಿ ಗರುಡ ಯುವಕ ಮಂಡಲ (ರಿ) ಚೊಕ್ಕಾಡಿ ಇವರ ಸಹಯೋಗಲಿ ಆಟಿ ಉತ್ಸವ ಕಾರ್ಯಕ್ರಮನ ನಡ್ಸಿದೊ.

ಹೊತ್ತಾರೆ 9.30 ಗಂಟೆಗೆ ಶ್ರೀಮತಿ ಸೀತಾ ಹೆಚ್, ಅಧ್ಯಕ್ಷರ್ ಗ್ರಾಮ ಪಂಚಾಯತ್ ಅಮರ ಮುಡ್ನೂರು ಇವು ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ. ಹಿಂಬೊತ್ತು ನಡ್ದ ಸಮಾರೋಪ ಸಮಾರಂಭಲಿ ಶ್ರೀ ಕೊಲ್ಯದ ಗಿರೀಶ್, ಅಕಾಡೆಮಿ ಅಧ್ಯಕ್ಷರ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದೊ, ಅಜ್ಜನಗದ್ದೆ ಶಾಲೆಯ ಅಧ್ಯಕ್ಷರಾದ ಶ್ರೀ ರವೀಂದ್ರ ಕಜೆ, ಗರುಡ ಯುವಕ ಮಂಡಲದ ಸ್ಥಾಪಕಧ್ಯಕ್ಷರಾದ ಶ್ರೀ ಶ್ರೀಧರ್ ಕರ್ಮಜೆ, ಸುಳ್ಯ ಯುವಜನ ಸಂಯುಕ್ತ ಮಂಡಳಿ ಅಧ್ಯಕ್ಷರಾದ ಶ್ರೀ ದೀಪಕ್, ಸುಳ್ಯ ವ್ಯವಸಾಯ ಸೇವಾ ಸಹಕಾರಿ ಸಂಘ ಉಪಾಧ್ಯಕ್ಷರಾದ ಶ್ರೀ ಯಶವಂತ, ಗ್ರಾಮಪಂಚಾಯತ್ ಸದಸ್ಯರಾದ ಶ್ರೀ ವೆಂಕಟರಮಣ ಹಾಗೂ ಅಕಾಡೆಮಿ ಸದಸ್ಯರಾದ ಡಾ.ಪೂವಪ್ಪ ಕಣಿಯೂರು, ಶ್ರೀ ಅಣ್ಣಾಜಿ ಗೌಡ, ಶ್ರೀ ಮೋಹನ್ ಸೋನ, ಶ್ರೀ ಬಿ.ಸಿ.ವಸಂತ, ಶ್ರೀ ಮೋಹನ್ ದಾಸ್, ಶ್ರೀ ಯಶವಂತ ಕುಡೆಕಲ್ ಇವು ಉಪಸ್ಥಿತರಿದ್ದೊ.

ಗ್ರಾಮೀಣ/ಮನರಂಜನೆ ಕ್ರೀಡೆಗಾದ ತೆಂಗಿನ ಕಾಯಿ ಕುಟ್ಟುದು, ನೋಂಡಿ, ಹಗ್ಗಜಗ್ಗಾಟ, ಸೋಗೆ ಓಟ, ಮಕ್ಕಳಿಗೆ ಕಪ್ಪೆ ಜಿಗಿತ, ಬುಗ್ಗೆ ಒಡೆಯೊದು, ಹುಣಸೆ ಬೀಜ ಹೆಕ್ಕುವುದು, ಕೆಸರು ಓಟ, ತೆಂಗಿನ ಕಾಯಿಗೆ ಗುರಿ ಇಡುವುದು, ಹಲಸಿನಕಾಯಿ ಪಾಸುಮಾಡುವುದು, ದಂಪತಿ ಇಟ್ಟಿಗೆ ನಡಿಗೆ ಇವುಗಳ್ನ ಏರ್ಪಡಿಸಿದ್ದೊ

ಸಾಂಸ್ಕೃತಿಕ ಕಾರ್ಯಕ್ರಮಗಳಾದ ಅರೆಭಾಷೆ ಗಾಯನ, ಅರೆಭಾಷೆ ಜಾನಪದ ನೃತ್ಯ, ಪ್ರಹಸನ ಮುಂತಾದ ಮನೋರಂಜನಾ ಕಾರ್ಯಕ್ರಮನ ಹಮ್ಮಿಕೊಂಡಿದ್ದೊ.

**ಕೆಸರುಗದ್ದೆ ಕ್ರೀಡೋತ್ಸವ :** ದಿನಾಂಕ 24.08.2016 ನೇ ಬುಧವಾರದಂದು ದ.ಕ.ಜಿಲ್ಲೆಯ, ಸುಳ್ಯ ತಾಲೂಕಿನ ,ಬೆಳ್ಳಾರೆ ಗ್ರಾಮದ ಐತಪ್ಪಗೌಡರವರ ಗದ್ದೆ ಇಲ್ಲಿ ಕೆಸರುಗದ್ದೆ ಕ್ರೀಡೋತ್ಸವ ಮತ್ತು ಸಾಂಪ್ರದಾಯಿಕ ನಾಟಿ ಓಟ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮನ ಬೆಳ್ಳಾರೆ ಗ್ರಾಮ ಗೌಡ ಸಮಿತಿ ಸಹಯೋಗದಲ್ಲಿ ಹಮ್ಮಿಕೊಂಡಿದ್ದೊ.

ಬೆಳಿಗ್ಗೆ 9.30 ಕ್ಕೆ ಶ್ರೀ ಎಸ್.ಎನ್.ಮನ್ಮಥ, ಸದಸ್ಯರು, ಜಿಲ್ಲಾ ಪಂಚಾಯತ್, ಬೆಳ್ಳಾರೆ ಕ್ಷೇತ್ರ ಇವು ಸಮಾರಂಭನ ಉದ್ಘಾಟನೆ ಮಾಡಿದ್ದೊ. ಶ್ರೀಮತಿ ದಿವ್ಯಪ್ರಭಾ ಚಿಲ್ತಡ್ಕ, ಅಧ್ಯಕ್ಷರು, ಕರ್ನಾಟಕ ಸಮಾಜ ಕಲ್ಯಾಣ ಮಂಡಳಿ, ಬೆಂಗಳೂರು ಇವು ರೈತ ಮಿತ್ರ ಸಲಕರಣೆಗಳ ಪ್ರದರ್ಶನದ ಚಾಲನೆ ನೀಡಿದೊ. ಅಕಾಡೆಮಿ ಅಧ್ಯಕ್ಷರಾದ ಶ್ರೀ ಕೊಲ್ಯದ ಗಿರೀಶ್ ಇವು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದೊ. ಮುಖ್ಯ ಅತಿಥಿಗಳಾಗಿ ಶ್ರೀ ಎಂ. ಮಾಧವ ಗೌಡ, ಉಪಾಧ್ಯಕ್ಷರು, ಗೌಡರ ಯುವ ಸೇವಾ ಸಂಘ (ರಿ), ಬೆಳ್ಳಾರೆ, ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಶಕುಂತಳಾ ನಾಗರಾಜ್, ಬೆಳ್ಳಾರೆ ಕ್ಷೇತ್ರ ತಾಲೂಕು ಪಂಚಾಯತ್ ಸದಸ್ಯರಾದ ಶ್ರೀಮತಿ ನಳಿನಾಕ್ಷಿ, ಬೆಳ್ಳಾರೆ, ಸರಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಚಂದ್ರಶೇಖರ ಕಾಂತಮಂಗಲ, ಮಹಾಲಿಂಗೇಶ್ವರ ದೇವಸ್ಥಾನ ಬೆಳ್ಳಾರೆ ಮೊಕ್ತೇಸರರು ಆದ ಶ್ರೀ ಸುರೇಶ್ ಕುಮಾರ್ ಶೆಟ್ಟಿ ಇವು ಕಾರ್ಯಕ್ರಮಲಿ ಉಪಸ್ಥಿತರಿದ್ದೊ.

ಗ್ರಾಮೀಣ ಹಾಗೂ ಮನರಂಜನಾ ಕ್ರೀಡೆಗಳಾದ ಕಾಳು ಹೆಕ್ಕುವುದು, ಕೆಸರುಗದ್ದೆ ಓಟ,ನೇಜಿ ತೆಗೆಯುವುದು-ನೆಡುವುದು, ಅಡಿಕೆ ಹಾಳೆಲಿ ಕುಳ್ಳಿರಿಸಿ ಎಳೆಯೊದು, ಹಗ್ಗ-ಜಗ್ಗಾಟ, ತ್ರೋಬಾಲ್, ವಾಲಿಬಾಲ್, ಮೊಸರು ಕುಡಿಕೆ ಒಡೆಯುವುದು, ಸೋಬಾನೆ ಇವುಗಳನ್ನು ಮಕ್ಕಳು,ಪುರುಷರು., ಮಹಿಳೆಯರಿಗೆ ಏರ್ಪಡಿಸಿದ್ದೊ. ಸ್ಪರ್ಧೆಗಳ್ಲಿ ಭಾಗವಹಿಸಿ ವಿಜೇತರಾದವುಕೆ ಗೌರವ ಸಂಭಾವನೆ ನೀಡಿ ಗೌರವಿಸಲಾಯಿತು.

ಸಮಾರೋಪ ಸಮಾರಂಭ ಅಪರಾಹ್ನ 3.00 ಗಂಟೆಗೆ ಇಟ್ಟುಕೊಂಡಿದ್ದೊ ಮುಖ್ಯ ಅತಿಥಿಗಳಾಗಿ ಶ್ರೀಮತಿ ರಾಜೀವಿ ಆರ್.ರೈ ಅಧ್ಯಕ್ಷರು, ಮಹಿಳಾ ವಿವಿದ್ದೊದ್ದೇಶ ಸಹಕಾರಿ ಸಂಘ ಬೆಳ್ಳಾರೆ, ಶ್ರೀ ದಿನೇಶ್ ಮಡಪ್ಪಾಡಿ, ಅಧ್ಯಕ್ಷರು, ಗೌಡರ ಯುವ ಸೇವಾ ಸಂಘ(ರಿ) ಸುಳ್ಯ, ಶ್ರೀ ಎಂ.ವೆಂಕಪ್ಪಗೌಡ, ನ್ಯಾಯವಾದಿಗಳು, ಶ್ರೀ ಚಂದ್ರಾ ಕೋಲ್ಚಾರ್, ಅಧ್ಯಕ್ಷರು, ಶ್ರೀ ವೆಂಕಟರಮಣ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ , ಶ್ರೀ ಉಮೇಶ್ ಕೆ.ಎಂ, ಶ್ರೀ ನವೀನ್ ಕುಮಾರ್ ರೈ, ಶ್ರೀ ಪ್ರದೀಪ್ ಕುಮಾರ್ ರೈ, ಶ್ರೀ ಪೂರ್ಣಿಮಾ, ಶ್ರೀ ಐತಪ್ಪ ಗೌಡ.ಕೆ ಬೆಳ್ಳಾರೆ ಗ್ರಾಮ ಗೌಡ ಸಮಿತಿ ಅಧ್ಯಕ್ಷರು, ಶ್ರೀ ನವೀನ ಗೌಡ ಎಂ, ಸದಸ್ಯರು ಗ್ರಾಮ ಪಂಚಾಯತ್ ಬೆಳ್ಳಾರೆ ಹಾಗೂ ಅಕಾಡೆಮಿ ಸದಸ್ಯರು ಉಪಸ್ಥಿತರಿದ್ದರು. ಡಾ. ಪೂವಪ್ಪ ಕಣಿಯೂರು 'ಕೃಷಿ ಸಂಸ್ಕೃತಿ' ಬಗ್ಗೆ ವಿಶೇಷ ಉಪನ್ಯಾಸ ನೀಡಿದೊ.

ಅರೆಭಾಷೆ ಹಾಡು ನೃತ್ಯ, ಸ್ವರಚಿತ ಕವನ ಜಾನಪದ ನೃತ್ಯಗಳ ಸಾಂಸ್ಕೃತಿಕ

ಕಾರ್ಯಕ್ರಮಗಳನ್ನು ನಡೆಸಲಾಯಿತು. ಅಕಾಡೆಮಿ ಸದಸ್ಯರಾದ ಡಾ ಪೂವಪ್ಪ ಕಣಿಯೂರು ರವರು ನಮ್ಮ ಕೃಷಿ ಬದುಕು ಬಗ್ಗೆ ಮಾತನಾಡಿದರು.

ಬೆಳಿಗ್ಗೆ 9.30 ಗಂಟೆಗೆ ಪ್ರಾರಂಭವಾಗಿ ಸಂಜೆ 7.00 ಗಂಟೆಗೆ ಮುಕ್ತಾಯವಾದ ಈ ಕಾರ್ಯಕ್ರಮದಲ್ಲಿ ಸುಮಾರು 600 ಕ್ಕೂ ಮೀರಿ ಸ್ಥಳೀಯರು ಕಲಾವಿದರು, ಕ್ರೀಡಾಭಿಮಾನಿಗಳು,ಭಾಷಾಭಿಮಾನಿಗಳು ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದೊ ಎಲ್ಲವುಕೂ ಮಧ್ಯಾಹ್ನದ ಊಟದ ವ್ಯವಸ್ಥೆ ಇತ್ತ್. ಕಾರ್ಯಕ್ರಮ ಯಶಸ್ವಿಯಾಗಿ ನಡ್ತ್.

**ಯುವ ಅರೆಭಾಷೆ ಸಾಹಿತ್ಯ ಸಮಾವೇಶ :** ತಾರೀಕ್ 10.11.2016 ಮತ್ತೆ 11.10.2016 ರಂದು ಕುಕ್ಕೆಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಕುಕ್ಕೆಶ್ರೀ ಸುಬ್ರಹ್ಮಣ್ಯ ಮಹಾವಿದ್ಯಾಲಯ, ಶ್ರೀ ಸುಬ್ರಹ್ಮಣ್ಯೇಶ್ವರ ಪದವಿಪೂರ್ವ ಕಾಲೇಜು, ಗೌಡ ಯುವ ಸೇವಾ ಸಂಘ ಸುಳ್ಯ ಮತ್ತೆ ಸುಬ್ರಹ್ಮಣ್ಯದ ಗೌಡ ಸಮಿತಿನವು ಇತರ ಸಂಘ-ಸಂಸ್ಥೆಗಳ ಸಹಕಾರದೊಂದಿಗೆ ಕುಕ್ಕೇಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ವಲ್ಲೀಶ ಭವನ ಇಲ್ಲಿ ಹಮ್ಮಿಕೊಂಡಿದ್ದೊ. ಹಿರಿಯ ಸಾಹಿತಿಗಳಾದ ಶ್ರೀ ಟಿ.ಜಿ. ಮುಡೂರು ನವು ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ.

ಅಕಾಡೆಮಿ ಅಧ್ಯಕ್ಷರಾದ ಶ್ರೀ ಕೊಲ್ಯದ ಗಿರೀಶ್ ನವು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದೊ. ಸುಬ್ರಹ್ಮಣ್ಯ ಗ್ರಾಮ ಪಂಚಾಯತ್ ಉಪಾಧ್ಯಕ್ಷರಾದ ಶ್ರೀ ದಿನೇಶ್, ಸತೀಶ್ ಕೂಜುಗೋಡು ಎ.ಪಿ.ಎಂ.ಸಿ ಸದಸ್ಯ, ಮಹಿಳಾ ಘಟಕದ ಅಧ್ಯಕ್ಷರಾದ ಶ್ರೀಮತಿ ರೇಣುಕಾ ಸದಾನಂದ, ತರುಣ ಘಟಕದ ಅಧ್ಯಕ್ಷರಾದ ಶ್ರೀ ಶಶಿಕಾಂತ್ ಮಾವಿನಕಟ್ಟೆ, ಕೆಎಸ್ಎಸ್ ಕಾಲೇಜಿನ ಪ್ರಾಂಶುಪಾಲರಾದ ಮನಮೋಹನ್ ಮುಡೂರು,ಶ್ರೀಮತಿ ಕಮಲಾ ಟಿ.ಜಿ.ಮುಡೂರು, ತಾ। ಅಕ್ರಮ ಸಕ್ರಮ ಸಮಿತಿ ಸದಸ್ಯರಾದ ಶ್ರೀಮತಿ ಲೀಲಾ ಮನಮೋಹನ್, ಅಕಾಡೆಮಿ ಸದಸ್ಯರಾದ ಶ್ರೀ ಯಶವಂತ ಕುಡೆಕಲ್ಲು ಶ್ರೀ ಅಣ್ಣಾಜಿ ಗೌಡ ಪೈಲೂರು, ಶ್ರೀ ಕಾರ್ಯಪ್ಪ ಗೌಡ ಯೇನೆಕಲ್ಲು, ಡಾ. ಕೋರನ ಸರಸ್ವತಿ, ಇವು ಉಪಸ್ಥಿತರಿದ್ದೊ.

**ಸಾಹಿತ್ಯ ಗೋಷ್ಠಿ :** ಜಾನಪದ ವಿದ್ವಾಂಸರಾದ ಶ್ರೀ ಆನಂದ ಗೌಡ ಪೆರ್ಲ ಇವು ಸಾಹಿತ್ಯ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದೊ, ಎಸ್ಎಸ್ ಪಿಯು ಕಾಲೇಜಿನ ವಿದ್ಯಾರ್ಥಿಗಳಾದ ಗಿರೀಶ್ ಕೆ. ಹಾಗೂ ಗ್ರೀಷ್ಮಾ ಪ್ರಬಂಧ ಮಂಡನೆ ಮಾಡ್ದೊ ಕವಿಗೋಷ್ಠಿಯ ಅಧ್ಯಕ್ಷತೆನ ಅಕಾಡೆಮಿ ಸದಸ್ಯೆ ಡಾ. ಕೋರನ ಸರಸ್ವತಿ ವಹಿಸಿದ್ದೊ ಕೆಎಸ್ಎಸ್ ಕಾಲೇಜಿನ ಶೋಭಾ ಹಾಗೂ ಎಸ್ಎಸ್‌ಪಿಯು ಕಾಲೇಜಿನ ಸೌಮ್ಯ, ಭೂಮಿಕಾ ಕವನ ವಾಚನ ಮಾಡಿದ್ದೊ. ಶ್ರೀ ಸುಬ್ರಹ್ಮಣೇಶ್ವರ ಪದವಿ ಕಾಲೇಜು ವಿದ್ಯಾರ್ಥಿಗಳು ಮತ್ತು ಚೇತನ್ ಪುರಿಯಾ ಬಳಗಂದ ಅರೆಭಾಷೆ 'ಜನಾಂಗದ ಹೆಜ್ಜೆಗ' ನೃತ್ಯರೂಪಕ ಪ್ರದರ್ಶನ ನಡ್ತ್.

ಸೆ.11 ರಂದ್ ನಡ್ದ ವಿಚಾರಗೋಷಿಲಿ ಶ್ರೀ ಪಟ್ಟಡ ಶಿವಕುಮಾರ್ ಅಧ್ಯಕ್ಷತೆ

ವಹಿಸಿದ್ದೊ, ಶ್ರೀಮತಿ ಚಂದ್ರಮತಿ ಮತ್ತು ಶಶಿಧರ ಪಳಂಗಾಯ ಇವು ಮಹಿಳೆ ಮತ್ತು ಸಮಾಜ, ಅರೆಭಾಷೆ ಸಾಂಸ್ಕೃತಿಕ ರಂಗ ಯುವ ಸಮುದಾಯ ಇದರ ಬಗ್ಗೆ ಉಪನ್ಯಾಸ ಮಾಡ್ದೊ.

ಸೆ.11 ರಂದ್ ನಡ್ದ ಸಮಾರೋಪ ಸಮಾರಂಭದ ಅಧ್ಯಕ್ಷತೆನ ಶ್ರೀ ಕೊಲ್ಯದ ಗಿರೀಶ್ ವಹಿಸಿದ್ದೊ. ಮುಖ್ಯ ನೆಂಟ್ರಾಗಿ ಶ್ರೀ ನಿತ್ಯಾನಂದ ಮುಂಡೋಡಿ. ಶ್ರೀ ನಿಂಗಯ್ಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕುಕ್ಕೆಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಶ್ರೀ ಮನಮೋಹನ್ ಮುಡೂರು, ಪ್ರಾಂಶುಪಾಲರು, ಕುಕ್ಕೆಶ್ರೀ ಸುಬ್ರಹ್ಮಣ್ಯ ಮಹಾವಿದ್ಯಾಲಯ, ಶ್ರೀ ಬಿ. ವಿಠಲರಾವ್, ಪ್ರಾಚಾರ್ಯರ್, ಶ್ರೀ ಸುಬ್ರಹ್ಮಣ್ಯೇಶ್ವರ ಪದವಿಪೂರ್ವ ಕಾಲೇಜು, ಶ್ರೀ ಅಶೋಕ್ ನೆಕ್ರಾಜೆ ಸದಸ್ಯರ್ ತಾಲೂಕು ಪಂಚಾಯತ್ ಸುಬ್ರಹ್ಮಣ್ಯ, ಶ್ರೀ ಜಯರಾಂ ದೇರಪ್ಪಜ್ಜನ ಮನೆ, ಉಪಾಧ್ಯಕ್ಷರ್, ಗೌಡರ ಯುವ ಸೇವಾ ಸಂಘ, ಶ್ರೀ ಲೊಕೇಶ್ ಬಿ.ಎನ್ ಅಧ್ಯಕ್ಷರು, ಗೌಡ ಗ್ರಾಮ ಸಮಿತಿ ಸುಬ್ರಹ್ಮಣ್ಯ, ಶ್ರೀಮತಿ ಭಾರತಿ ದಿನೇಶ್, ಅಧ್ಯಕ್ಷರ್, ಗೌಡ ಮಹಿಳಾ ಗ್ರಾಮ ಸಮಿತಿ ಇವು ಉಪಸ್ಥಿತರಿದ್ದೊ.

ಕುಕ್ಕೇ ಶ್ರೀ ಸುಬ್ರಹ್ಮಣ್ಯ ಮಹಾವಿದ್ಯಾಲಯದ ವಿದ್ಯಾರ್ಥಿ ವೃಂದ ಇವರಿಂದ ಸಾಂಸ್ಕೃತಿಕ ಕಾರ್ಯಕ್ರಮಗ ನಡ್ದೊ. ಧಾಮಿಕ ಕ್ಷೇತ್ರ ಕುಕ್ಕೆ ಸುಬ್ರಹ್ಮಣ್ಯಲಿ ನಡ್ದ ಈ ಕಾರ್ಯಕ್ರಮ ಯಶಸ್ವಿಯಾಗಿ ನಡ್ತ್.

## ಅರೆಬಾಸೆ ಸಂಸ್ಕೃತಿಲಿ ಸಾಂಪ್ರದಾಯಿಕ ಅಡಿಗೆ ತರಬೇತಿ ಕಾರ್ಯಾಗಾರ ಮತ್ತೆ ಪ್ರಾತ್ಯಕ್ಷಿಕೆ

ತಾರೀಕ್ 13.09.2016 ರಿಂದ 17.09.2016 ರವರೆಗೆ ಮರಗೋಡು ಗೌಡ ಸಮಾಜದಲ್ಲಿ ಅರೆಭಾಷೆ ಸಂಸ್ಕೃತಿಯಲ್ಲಿ ಸಾಂಪ್ರದಾಯಿಕ ಅಡಿಗೆ ತರಬೇತಿ ಶಿಬಿರನ ಏರ್ಪಡಿಸಿದ್ದೊ, ಕೊಡಗಿನಾದ್ಯಂತ ಅರೆಬಾಸೆ ಜನಾಂಗದ ಮಹಿಳೆಯರ್ ಈ ಶಿಬಿರಲಿ ಭಾಗಿಯಾಗಿ ಪ್ರಯೋಜನ ಪಡ್ಕಂಡ್, ಹಬ್ಬಹರಿದಿನಗಳ ಅಡುಗೆ ಮಾಡಿ ಪ್ರದರ್ಶನ ನೀಡ್ದೊ. ಮರಗೋಡು ಗಣಪತಿ ದೇವಸ್ಥಾನಂದ ಅರೆಭಾಷೆ ಸಂಸ್ಕೃತಿನ ಬಿಂಬಿಸುವ ಮೆರವಣಿಗೆ ಗೌಡ ಸಮಾಜಕ್ಕೆ ಬಾತ್. ಮೆರವಣಿಗೆ ಉದ್ಘಾಟಕರಾಗಿ ಶ್ರೀ ದೇವಜನ ನಾಣಯ್ಯ, ಅಧ್ಯಕ್ಷರು, ಗೌಡ ಸಮಾಜ, ಮರಗೋಡು, ಮುಖ್ಯ ನೆಂಟ್ರಾಗಿ ಶ್ರೀ ಮಳ್ಳಂದಿರ ಲುಸ್ವಾಪತಿ,ಮರಗೋಡು ಇವು ಭಾಗಿಯಾಗಿದ್ದೊ.

ಹೊತ್ತಾರೆ 10.00 ಗಂಟೆಗೆ ಸಾಂಪ್ರದಾಯಿಕ ಅಡಿಗೆ ಪ್ರದರ್ಶನನ ಉದ್ಘಾಟನೆ ಮಾಡ್ದೊ, ಶ್ರೀಮತಿ ಅಯ್ಯಂಡ್ರ ಪಾರ್ವತಿ ಪೂಣಚ್ಚ ಇವರು ಮುಖ್ಯ ನೆಂಟ್ರಾಗಿ ಭಾಗಿಯಾಗಿದ್ದೊ.

ತಾರೀಕ್ 18.9.2016 ರಂದ್ ಸಮಾರೋಪ ಸಮಾರಮ್ಭ ಹಮ್ಮಿಕಂಡೊ. ಹೊತ್ತಾರೆ 10.30 ಗಂಟೆಗೆ ನಡ್ದ ಸಮಾರೋಪ ಸಮಾರಂಭನ ಶ್ರೀ ಕೆ.ಜಿ.ಬೋಪಯ್ಯ, ಸನ್ಮಾನ್ಯ ಶಾಸಕರು ವಿರಾಜಪೇಟೆ ವಿಧಾನಸಭಾ ಕ್ಷೇತ್ರ ಇವು ಪಾಲ್ಗೊಂಡಿದ್ದೊ. ಶ್ರೀ

ಕೊಲ್ಯದ ಗಿರೀಶ್ ಅಕಾಡೆಮಿ ಅಧ್ಯಕರ್ ಅಧ್ಯಕ್ಷತೆ ವಹಿಸಿದ್ದೊ, ಮುಖ್ಯ ಅತಿಥಿಗಳಾಗಿ ಶ್ರೀಮತಿ ವೀಣಾ ಅಚ್ಚಯ್ಯ, ವಿಧಾನಪರಿಷತ್ ಸದಸ್ಯರ್, ಶ್ರೀ ಮಂಡೆಪಂಡ ಸುನಿಲ್ ಸುಬ್ರಮಣಿ, ವಿಧಾನಪರಿಷತ್ ಸದಸ್ಯರ್, ಶ್ರೀಮತಿ ದಿವ್ಯಪ್ರಭಾ ಚಿಲ್ತಡ್ಕ, ಅಧ್ಯಕ್ಷರ್ ಕರ್ನಾಟಕ ಸಮಾಜ ಕಲ್ಯಾಣ ಮಂಡಳಿ, ಬೆಂಗಳೂರು, ಕು.ಮಮತಾ ಪಿ.ಎಸ್, ಅಧ್ಯಕ್ಷರ್ ಮರಗೋಡು ಗ್ರಾಮ ಪಂಚಾಯತ್, ಶ್ರೀಮತಿ ಕಲಾವತಿ ಪೂವಪ್ಪ, ಸದಸ್ಯರ್, ಕೊಡಗು ಜಿಲ್ಲಾ ಪಂಚಾಯತ್, ಶ್ರೀ ಬಿ.ವೈ ಅಪ್ಪುರವೀಂದ್ರ, ಸದಸ್ಯರ್ ತಾಲ್ಲೂಕು ಪಂಚಾಯತ್, ಮಡಿಕೇರಿ, ಡಾ. ಕರ್ಣಯ್ಯನ ಎಸ್.ಅಪ್ಪಯ್ಯ, ಕೆ.ಎ.ಎಸ್, ನಿವೃತ್ತ ಹೆಚ್ಚುವರಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು, ಶ್ರೀ ಕಾಂಗೀರ ನಂಜುಂಡ, ಉಪಾಧ್ಯಕ್ಷರು, ಭಾರತೀಯ ಎಜುಕೇಷನಲ್ ಸೊಸೈಟಿ, ಮರಗೋಡು ಇವು ಉಪಸ್ಥಿತರಿದ್ದೊ.

ಶ್ರೀ ಪಟ್ಟಡ ಶಿವಕುಮಾರ್, ಉಪನ್ಯಾಸಕರ್, ಸ.ಪ.ಪೂ ಕಾಲೇಜು ಇವ್ ಅರೆಭಾಷಿಕರ ಅಡಿಗೆ ಸಂಸ್ಕೃತಿಯ ವಿಶ್ಲೇಷಣೆ ಮಾಡ್ದೊ. ಅರೆಭಾಷೆ ಸಂಸ್ಕೃತಿನ ಬಿಂಬಿಸುವಂತ ಸಾಂಸ್ಕೃತಿಕ ಕಾರ್ಯಕ್ರಮಗ ನಡ್ದೊ. ಹೊತ್ತಾರೆ 9.30 ಕ್ಕೆ ಶುರು ಆದ ಕಾರ್ಯಕ್ರಮ ಸಂಜೆ 5.00ಗಂಟೆಗೆ ಮುಗ್ತ್, 1500ಕ್ಕೂ ಮೀರಿ ಸ್ಥಳೀಯರು, ಭಾಷಾಭಿಮಾನಿಗ, ಕಲಾವಿದರ್ ಭಾಗಿಯಾಗಿದ್ದೊ, ಅಕಾಡೆಮಿಂದ ಪುಸ್ತಕ ಪ್ರದರ್ಶನ ಮತ್ತೆ ಮಾರಾಟ ಇತ್ತ್.

## ಅಕಾಡೆಮಿ ಪ್ರಾಯೋಜಿತ ಕಾರ್ಯಕ್ರಮಗ :

ತಾರೀಕ್ 24.08.2016 ರಂದ್ ಮಿತ್ರ ಯುವಕ ಮಂಡಲ (ರಿ) ಸುಳ್ಯ ಇವ್ ಏರ್ಪಡಿಸಿದ್ದ 25ನೇ ವರ್ಷದ ಶ್ರೀ ಕೃಷ್ಣ ಜನ್ಮಾಷ್ಟಮಿ ಬೆಳ್ಳಿಹಬ್ಬ ಕಾರ್ಯಕ್ರಮಕ್ಕೆ ಶ್ರೀಮತಿ ಆಶಾ, ಮರಗೋಡು ಇವರ ತಂಡಂದ ಅರೆಭಾಷೆ ಸಾಂಸ್ಕೃತಿಕ ನೃತ್ಯ ಕಾರ್ಯಕ್ರಮನ ಪ್ರಾಯೋಜಿಸಿದ್ದೊ.

ತಾರೀಕ್ 30.08.2016 ರಂದ್ ಸೋಮವಾರಪೇಟೆ ತಾಲೂಕಿನ ಶಿರಂಗಾಲ ಗ್ರಾಮದ ಪದವಿಪೂರ್ವ ಕಾಲೇಜು ಆವರಣ ಇಲ್ಲಿ ಕನ್ನಡ ಸಾಹಿತ್ಯ ಪರಿಷತ್, ಕೊಡಗು ಜಿಲ್ಲೆ ಇವರು ನಡ್ಸಿದ ಮುಂಗಾರು ಸಂಪದ ಕಾರ್ಯಕ್ರಮಕ್ಕೆ ಶ್ರೀಮತಿ ಮಮತ.ಎಂ ಕುಶಾಲನಗರ ಇವರ ತಂಡಂದ ಅರೆಭಾಷೆ ರೈತ ಸಂಸ್ಕೃತಿಗೆ ಸಂಬಂದಪಟ್ಟಂತ ಸಾಂಸ್ಕೃತಿಕ ಕಾರ್ಯಕ್ರಮ ಮತ್ತೆ ಶ್ರೀ ಮಂಜುನಾಥ ತೊರೆನರು ಗ್ರಾಮ ಇವರ ತಂಡಂದ ಉಳುಮೆ ಹಾಡ್, ನಾಟಿ ಹಾಡ್, ಜಾನಪದ ಕುಣ್ತ, ಸಾಂಸ್ಕೃತಿಕ ಕಾರ್ಯಕ್ರಮನ ಪ್ರಾಯೋಜಿಸಿದ್ದೊ.

ತಾರೀಕ್ 04.09.2016 ರಂದ್ ಮಂಡೆಕೋಲು ಗ್ರಾಮದ ಸಾರ್ವಜನಿಕ ಶ್ರೀ ಗಣೇಶೋತ್ಸವ ಸಮಿತಿ ಇವ್ ನಡ್ಸಿದ ಗಣೇಶೋತ್ಸವ ಕಾರ್ಯಕ್ರಮಕ್ಕೆ ಲವಿನ್ ಮತ್ತೆ ರಕ್ಷಾ ಇವರ್‌ಂದ ಅರೆಭಾಷೆ ಯಕ್ಷಗಾನ ನ ಪ್ರಾಯೋಜಸಿದ್ದೊ.

# ಲೇಖಕರ ವಿಳಾಸ :

1. **ಶ್ರೀಮತಿ ಸಂಗೀತಾ ರವಿರಾಜ್,** ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು ಮಡಿಕೇರಿ –574239, ಮೊ.ನಂ : 7259135346
2. **ಪ್ರೊ. ಎನ್ ಸುಕುಮಾರ ಗೌಡ,** ಮಕ್ಕಳ ಮಂಟಪ, ದರ್ಬೆ, ಪುತ್ತೂರು ದ.ಕ. –574202
3. **ಕ್ಷಿತಿಜ ಕೆ.ಜೆ.** 'ನಿಸರ್ಗ ನಿವಾಸ್' ಎಫ್.ಎಂ.ಸಿ ಕಾಲೇಜು ಹಿಂದೆ, ವಿದ್ಯಾನಗರ ರಸ್ತೆ, ಮಡಿಕೇರಿ
4. **ಕಟ್ರತನ ಕೆ. ಬೆಳ್ಯಪ್ಪ,** ನಿವೃತ್ತ ಅಧ್ಯಾಪಕ, ಬಲಮುರಿ ಅಂಚೆ ಮತ್ತು ಗ್ರಾಮ ಮಡಿಕೇರಿ –571252
5. **ಬಿಟ್ಟೀರ ಶ್ರುತಿ ಬೆಳ್ಯಪ್ಪ,** ಕಿರುಂದಾಡು, ಮಡಿಕೇರಿ, ಕೊಡಗು
6. **ಕಟ್ರತನ ಲಲಿತಾ ಅಯ್ಯಣ್ಣ,** 'ಅನುಗ್ರಹ' ಗೌಳಿಬೀದಿ, ಮಡಿಕೇರಿ, 571201
7. **ವಿನೋದ್ ಮೂಡಗದ್ದೆ,** ತಿತಿಮತಿ, ಭದ್ರಗೋಳ, ವಿರಾಜಪೇಟೆ
8. **ಎಂ.ಜಿ. ಕಾವೇರಮ್ಮ,** ನಿಸರ್ಗ, ಸುಳ್ಯ, ದ.ಕ  574239, ಮೊ: 9448106685
9. **ಮನೋಜ್ ಕುಡೆಕಲ್ಲು,** ಆಲೆಟ್ಟಿ ಗ್ರಾಮ ಮತ್ತು ಅಂಚೆ, ಸುಳ್ಯ ದ.ಕ, ಮೊ: 8105774518
10. **ಶ್ರೀಮತಿ ರೇಷ್ಮ ಕರುಣಾಕರ,** ಪೆಲ್ತಡ್ಕ ಮನೆ, ಗೂನಡ್ಕ ಅಂಚೆ, ಸುಳ್ಯ ತಾಲೂಕು ದ.ಕ.
11. **ಕುತ್ಯಾಳ ನಾಗಪ್ಪ ಗೌಡ (ಕಿರಣ),** ಕಿರಣ ಕುಟೀರ, ಸುಳ್ಯ, ದ.ಕ. 574239, ಮೊ: 9448297221, ಇಟಿರಂಇುಡಿಚಿಟಿಚಿ@ರಟಚಿಟಿ.ಛಿಂಟ
12. **ಭವಾನಿಶಂಕರ ಅಡ್ತಲೆ,** ಕೆ.ವಿ.ಜಿ ಐ.ಟಿ.ಐ, ಸುಳ್ಯ ದ.ಕ ಕುರುಂಜಿಭಾಗ್– 574327
13. **ವಿದ್ವಾನ್ ಟಿ.ಜಿ ಮುಡೂರು,** ಎಂ.ಎ, ಬಿ.ಎಡ್., ಪಂಜ ದ.ಕ.– 574232, ಮೊ: 9449324260
14. **ಬೈತಡ್ಕ ಜಾನಕಿ ಬೆಳ್ಯಪ್ಪ,** ಲೇಖಕರು, ಮಡಿಕೇರಿ ಮೊ :9008571899

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (2014)

ಸರಕಾರಿ ಅಧಿಸೂಚನೆ ಸಂಖ್ಯೆ: ಕಸಂವಾ 817 ಕಸಧ 2013; ದಿನಾಂಕ 13.08.2014

**ಅಧ್ಯಕ್ಷರು:**

**ಶ್ರೀ ಕೊಲ್ಯದ ಗಿರೀಶ್,** ಮದೆ ಗ್ರಾಮ, ಮದೆ ಅಂಚೆ, ಮಡಿಕೇರಿ ತಾಲೂಕ್ 571 201 ದೂ: 08272–236515 ಮೊಬೈಲ್ : 9448156599.

**ರಿಜಿಸ್ಟ್ರಾರ್:**

**ಶ್ರೀ ಉಮರಬ್ಬ,** ಎಂ.ಎಂ. ಮಂಜಿಲ್, ಈದಾಯತ್ ನಗರ, ಕೋಟೆಕಾರ್, ಮಂಗಳೂರು, ಮೊಬೈಲ್ : 9481149135

**ಅರ್ಥ ಸದಸ್ಯರು:**

**ಶ್ರೀ ಎಲ್.ಎನ್. ಕುಳ್ಳಯ್ಯ,** ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಡಿಕೇರಿ,

**ಸದಸ್ಯರು :**

**ಡಾ. ಪೂವಪ್ಪ ಕಣಿಯೂರು** ಸ್ಫೂರ್ತಿ 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಚರ್ಚ್ ರೋಡು, ಸುಳ್ಯ ದ.ಕ. ದೂರವಾಣಿ : 08257–232885/9448984485, pkaniyoor@gmail.com

**ಡಾ. ಕೋರನ ಸರಸ್ವತಿ ಪ್ರಕಾಶ್** ಸಹ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ವಿರಾಜಪೇಟೆ, ಕೊಡಗು ಮೊಬೈಲ್ : 9483826271

**ಶ್ರೀ ಮೋಹನ್ ಸೋನ ಸೋಣಂಗೇರಿ** ನಡುಮನೆ, ಜಾಲ್ಸೂರು, ಸುಳ್ಯ ತಾಲೂಕು ದ.ಕ.– 574239 ಮೊಬೈಲ್ : 9448791799

**ಶ್ರೀಮತಿ ಸಂಗೀತಾ ರವಿರಾಜ್,** ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು, ಮಡಿಕೇರಿ– 574234 ಮೊಬೈಲ್ 7259135346

**ಶ್ರೀ ಯಶವಂತ ಕುಡೆಕಲ್,** ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ದ.ಕ. –574239 ಮೊಬೈಲ್ : 9481180519

**ಶ್ರೀ ವಸಂತ ಬಿ.ಸಿ.,** ಬಾಕಿಲ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9449999354

**ಶ್ರೀ ಬೋಜಪ್ಪ ಗೌಡ ಎಂ.** ಮದುವೆ ಗದ್ದೆ, ಉಬರಡ್ಕ ಮಿತ್ತೂರು, ಸುಳ್ಯ ತಾಲೂಕು ದ.ಕ.– 574248 ಮೊಬೈಲ್ : 7760782925

**ಶ್ರೀ ಸದಾನಂದ ಗೌಡ ಮಾವಜಿ,** ಮಂಡೆಕೋಲು, ಸುಳ್ಯ ತಾಲೂಕು ದ.ಕ.–574239 ಮೊಬೈಲ್ : 9448164638

**ಶ್ರೀ ಮೋಹನ್‌ದಾಸ್ ಮಂದ್ರೀರ,** ಹೊಸ್ಕೇರಿ ಗ್ರಾಮ, ಮರಗೋಡು, ಮಡಿಕೇರಿ, ಮೊಬೈಲ್ : 9448720112

**ಸಹಸದಸ್ಯರು:**

**ಶ್ರೀ ಕುಡೆಕಲ್ ಸಂತೋಷ್,** ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ ತಾಲೂಕು, ಕೊಡಗು ಮೊಬೈಲ್ : 9972538584, 8762110948

**ಶ್ರೀ ಕಾರ್ಯಪ್ಪ ಪಿ.ಎಸ್.,** ಪುಂಡಿಗದ್ದೆ, ಯೇನೇಕಲ್ ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9731197656

**ಶ್ರೀ ಅಣ್ಣಾಜಿ ಗೌಡ ಪೈಲೂರು ಮನೆ,** ಅಮರಮುಡ್ನೂರು ಗ್ರಾಮ, ಸುಳ್ಯ ತಾಲೂಕು ದ.ಕ. – 574212 ಮೊಬೈಲ್ : 94488058748/9164401745



ದಿ. 14.8.2016, ಪೈಲಾರ್ ಆಟಿ ಉತ್ಸವದ ಉದ್ಘಾಟನೆ




ಸಾಂಪ್ರದಾಯಿಕ ಅಡುಗೆ ಪ್ರಾತ್ಯಕ್ಷಿಕೆ - ಮರಗೋಡು- 13.9.2016 - 17.9.2016



ಅರೆಭಾಷೆ ಸಾಂಸ್ಕೃತಿಕ ನೃತ್ಯ - 24.8.2016- ಸುಳ್ಯ




ಆಟಿ ಉತ್ಸವ 2016 -ಸಮಾರೋಪ ಸಮಾರಂಭ -ಪೈಲಾರು

HINGARA | Arebhashe Quarterly | Volume -1, Issue -2
Date: 10-11-2016 Kodagu | KARARB 00001 | Price : 20/- Pages : 88



ಯಕ್ಷಗಾನ ಪ್ರದರ್ಶನ, ಮಂಡೆಕೋಲು ಗಣೇಶೋತ್ಸವ–4.9.2016



ಬೆಳ್ಳಾರೆ ಕೆಸರುಗದ್ದೆ ವಾಲಿಬಾಲ್ –24.8.2016



ಪೈಲಾರ್– ಆಟಿ ಉತ್ಸವ – ಅರೆಭಾಷಿಕ ಜನಪದ ಹಾಡು–24.8.2016

Printed by UMARABBA on behalf of Registar, Karnataka Arebhase Samskruthi Mathu Sahitya Academy, and, Published by UMARABBA on behaf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahitya Academy, Coffee Krupa Building, 1st Floor, Raja Seat Road, Madikeri, Kodagu District. Editor